

ಕರ್ನಾಟಕ ಸರ್ಕಾರ

# ಸಿರಿ ಕನ್ನಡ





## ಒಂಬತ್ತನೆಯ ತರಗತಿ

### ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕ

## ೨೦೧೫

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)**
೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೆಯ ಹಂತ
ಬೆಂಗಳೂರು–೫೬೦೦೮೫

# ಮುನ್ನುಡಿ

೨೦೦೫ನೆಯ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೆಯ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೫ ರಿಂದ ೧೦ ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ

ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯವಸ್ತು ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

## ಪಠ್ಯ ಓದು ಹಾಗೂ ಬೋಧನೆಗೆ ಮುನ್ನ ಬೋಧಕರೊಂದಿಗೆ ಸಮಾಲೋಚನೆ.......

ಸ್ಪರ್ಧಾತ್ಮಕ ನಾಗರಿಕ, ಶೈಕ್ಷಣಿಕ ಹಾಗೂ ಜಾಗತಿಕ ಹೊತ್ತಿದು. ಪ್ರತಿಯೊಂದು ಭೌತಿಕ ಹಾಗೂ ಬೌದ್ಧಿಕ ಆಯಾಮದಲ್ಲೂ ನವನವೀನ ಶೈಕ್ಷಣಿಕ ಸಂಶೋಧನೆ, ಚಿಂತನಾ ಆವಿಷ್ಕಾರ, ಕಲಿಕಾ ಕೌಶಲ, ತಂತ್ರಗಾರಿಕೆ ಮತ್ತು ವೈಜ್ಞಾನಿಕ ಮನೋಭಾವವನ್ನು ಸ್ಥಿರೀಕರಿಸುವ ವಾಸ್ತವಿಕ ಪ್ರಯತ್ನ ನಾಡಿನಾದ್ಯಂತ ನಡೆದಿದ್ದು, ನಡೆಯುತ್ತಲೂ ಇದೆ. ಈಗಿನ ಸಂದರ್ಭ, ಸ್ಥಿತಿಗತಿಯನ್ನು ಮನಗಂಡ ಶಿಕ್ಷಣತಜ್ಞರು, ಭಾಷಾವಿಜ್ಞಾನಿಗಳು, ಮನೋವಿಜ್ಞಾನಿಗಳು, ಸಾಹಿತ್ಯ ವಿದ್ವಾಂಸರು ಹಾಗೂ ಸುಶಿಕ್ಷಿತರು ಕೂಡಿ ಆಯೋಜಿಸಿದ ನಿರ್ದಿಷ್ಟ ನಿಯೋಜನಾ ಫಲವೇ ಹೊಸ ಪಠ್ಯ ತಯಾರಿ ಹಾಗೂ ಅನುಷ್ಠಾನತೆ.

ಶೈಕ್ಷಣಿಕ ಜೀವನದಲ್ಲಿ ಕಲಿಕಾರ್ಥಿಗಳ ತಾಯ್ನುಡಿಯ ಕಲಿಕೆ ಹಾಗೂ ಬಳಕೆ ಮಹತ್ವದ್ದು. ಅದಕ್ಕೆ ಪೂರಕವಾಗಿ ಶಿಕ್ಷಣ ಇಲಾಖೆ ನಿಗದಿಪಡಿಸುವ ಬೋಧನಾ ಪಠ್ಯ ಅತ್ಯಗತ್ಯ ಹಾಗೂ ಅನಿವಾರ್ಯ. ಸಾಮಾನ್ಯವಾಗಿ ಮಕ್ಕಳ ಪರಿಸರದ ಮಾತು ನಿತ್ಯದ ಪರಸ್ಪರ ಸಂವಹನ ಸಂಪರ್ಕಕ್ಕಷ್ಟೇ ಸೀಮಿತವಾಗಿರದೇ ಜ್ಞಾನಾರ್ಜನೆಯ ಉದ್ದೇಶವೂ ಅದರ ಗುರಿ. ಮಕ್ಕಳು ತಮ್ಮ ನುಡಿಯಲ್ಲೇ ಶಾಲಾಮಟ್ಟದ ಸಂವಹನ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾ ಶೈಕ್ಷಣಿಕ ಸಾರ್ಥಕತೆಗೆ ತಮ್ಮನ್ನು ತೆರೆದುಕೊಳ್ಳುವ ಆಶಯದಿಂದ ಔಪಚಾರಿಕ ನೆಲೆಯಲ್ಲಿ ಸಿದ್ಧಪಡಿಸಿ ನಿಯೋಜಿಸಿರುವ ಕಲಿಕಾ ಹಾಗೂ ಬೋಧನಾ ಪಠ್ಯವಿದು. ಕಲಿಕೆಯ ಮೂಲಭೂತ ಕೌಶಲಗಳ ವೈಜ್ಞಾನಿಕ ದೃಢತ್ವವೇ ಅವುಗಳ ಆಂತರ್ಯದ ದನಿ.

ಕಲಿಕೆ ಹಾಗೂ ಕಲಿಸುವಿಕೆಯ ನಿರ್ಧಾರಿತ ವಿಧಾನ ಮತ್ತು ಮೌಲ್ಯವನ್ನು ಸಾರ್ವತ್ರಿಕ ಶೈಕ್ಷಣಿಕ ನೆಲೆಯಲ್ಲಿ ಮೌಲೀಕರಿಸುವ ಉದ್ದೇಶದಿಂದ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಗೆ ಬದ್ಧವಾಗಿ, ೨೦೦೧ – ೨೦೦೨ರ ಶೈಕ್ಷಣಿಕ ಆಧುನಿಕತೆಗೆ ಪೂರಕವಾಗಿ ಪಠ್ಯಪುಸ್ತಕಗಳ ಕಟ್ಟುವಿಕೆ ಶೋಧ ಹೊಸರೂಪ ಪಡೆಯಿತು. ಮಕ್ಕಳ ಮಾನಸಿಕ ವಲಯಕ್ಕೆ ಸರಿಹೊಂದುವಂತೆ ಪರಿಷ್ಕಾರಗೊಂಡು ಕಾಲಧರ್ಮಕ್ಕನುಗುಣ ಶೈಕ್ಷಣಿಕತೆಗೆ ಸಮರ್ಪಕವಾದವು. ಹಾಗಾಗಿಯೂ ಇಂದಿನ ಶೈಕ್ಷಣಿಕ ಆಶೋತ್ತರ, ೨೦೦೫ – ಎನ್.ಸಿ.ಎಫ್. ನೆಲೆಯಾಧಾರಿತ ಆನ್ವಯಿಕ ಶೋಧನಾ ಚಿಂತನೆಗಳನ್ನು ಗುರುತರವಾಗಿ ಗಮನಿಸುವುದು ಹಿತಕರ. ಇದು ಸುಶಿಕ್ಷಿತ ವ್ಯಕ್ತಿತ್ವ ವಿಕಸನಕ್ಕೆ ನಾಂದಿ ಅಲ್ಲದೇ ದಾರಿದೀಪ.

ಕಲಿಕೆ ಮತ್ತು ಬೋಧನಾಂಶಗಳನ್ನು ಪಠ್ಯಪುಸ್ತಕದಲ್ಲಿ ಸಮತೋಲನವಾಗಿ ಪರಿಗಣಿಸಿ ಯುಕ್ತ ಹಾಗೂ ಸಹಜ ಕಲಿಕಾ ಪ್ರಾಯೋಗಿಕತೆಯ ಮೂಲಕ ಸಮನ್ವಯಗೊಳಿಸಿ, ಭಾಷಾ ಕಲಿಕೆ ಮತ್ತು ಜ್ಞಾನ ಸಂವರ್ಧನೆಗೆ ಅವಕಾಶ ಕಲ್ಪಿಸಿಕೊಡಬೇಕು. ಆ ನಿಟ್ಟಿನಲ್ಲಿ ಸಿರಿ ಕನ್ನಡ – ೯ ಪಠ್ಯಪುಸ್ತಕ ಸಮರ್ಥನೀಯ. ಇತ್ತೀಚಿನ ಕಲಿಕೆಯ ಎಲ್ಲಾ ಸಾಧಕ–ಬಾಧಕಗಳನ್ನು ತಾರ್ಕಿಕವಾಗಿ ಗಮನಿಸಿ ಅಳವಡಿಸಲಾಗಿದೆ. ಪ್ರಮುಖವಾಗಿ ತರಗತಿವಾರು ಕಲಿಕೆಯ ಮೂಲವಿಷಯ ಮತ್ತು ನಿರ್ಧರಿಸಿದ ಮಾನವೀಯ ಮೌಲ್ಯಗಳಿಗೆ ಒತ್ತುನೀಡಿದೆ. ಕ್ಷೇತ್ರಗಳಿಗನುಗುಣವಾಗಿ ಭಾಷಾ ಸಾಮರ್ಥ್ಯಗಳನ್ನು ಅನ್ವಯಿಸಿ ಸಮರ್ಥ ಕಲಿಕೆಗೆ ಅನುವಾಗುವಂತೆ ಪಠ್ಯದ ನಿಶ್ಚಿತ ಗದ್ಯ–ಪದ್ಯ ಪಾಠಗಳಲ್ಲಿ ಅಳವಡಿಸಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಪ್ರಾದೇಶಿಕ ಮತ್ತು ಲಿಂಗ ಸಮಾನತೆಯನ್ನು ಕಾಯ್ದುಕೊಂಡಿದೆ. ನಿಯೋಜಿತ ಪಾಠಗಳೆಲ್ಲವೂ ಸ್ವಕಲಿಕೆ ಹಾಗೂ ಬೋಧನಾ ಕೌಶಲಕ್ಕೆ ಸೂಕ್ತ ಹಾಗೂ ಪೂರಕವಾಗಿವೆ. ಕಲಿಕಾರ್ಥಿಗಳ ಆಸಕ್ತಿ ಮತ್ತು ಉಲ್ಲಾಸವನ್ನು ಉದ್ದೀಪನಗೊಳಿಸುವ ಉದ್ದೇಶದಿಂದ ರಚಿಸಿರುವ ಪಾಠಗಳಲ್ಲಿ ವೈವಿಧ್ಯತೆಯನ್ನೂ ಕಾಪಾಡಿಕೊಳ್ಳುವಲ್ಲಿ ಪಠ್ಯ ಸಫಲಗೊಂಡಿದೆ.

ಬೋಧನಾ ವಿಶೇಷತೆಯೊಂದಿಗೆ ಆಯ್ದು ನಿಗದಿಪಡಿಸಿದ ಸಾಹಿತ್ಯಪ್ರಕಾರದ ಭಾಗಗಳನ್ನು ಅರ್ಥೈಸಿಕೊಳ್ಳಲು ಸೈದ್ಧಾಂತಿಕ ಮತ್ತು ಪ್ರಾಯೋಗಿಕ ಕ್ರಿಯಾತ್ಮಕ ಭಾಷಿಕ ಕ್ರಮಗಳನ್ನು ವ್ಯವಸ್ಥಿತವಾಗಿ ಅನ್ವಯಿಸಿದೆ. ಭಾಷಾಶುದ್ಧತೆ, ವಾಸ್ತವಿಕತೆ ಮತ್ತು ತರ್ಕಬದ್ಧತೆಯನ್ನೂ ಜತನದಿಂದ ಸ್ಥಿರೀಕರಿಸಿದೆ. ಕಲಿಕಾ ಮೂಲತತ್ವವನ್ನು ಸಮರ್ಪಕವಾಗಿ ಅನುಸರಿಸಿದೆ.

ಮುಖ್ಯವಾಗಿ ಮಕ್ಕಳ ಕಲಿಕಾ ಪ್ರಾಯೋಗಿಕತೆಯನ್ನು ಸಮರ್ಥ ರೀತಿಯಲ್ಲಿ ಮೌಲೀಕರಿಸುವ ಉದ್ದೇಶದಿಂದ ಮುನ್ತಯಾರಿ ಮೂಲಕ ಪಠ್ಯದಲ್ಲಿನ ನಿಗದಿತ ಕಲಿಕಾ ಗದ್ಯಪಾಠ ಮತ್ತು ಪದ್ಯಪಾಠಗಳ ಸ್ಪಷ್ಟ ಅರ್ಥೈಸುವಿಕೆಯ ನೆಲೆಯನ್ನು ವಿವರಿಸುತ್ತಾ ಗದ್ಯ ಪದ್ಯಕ್ಕೆ ಸಂಬಂಧಿಸಿದಂತೆ ಪ್ರಾಯೋಗಿಕ ಓದು ಗ್ರಹಿಕಾ ಅಭ್ಯಾಸ, ಸಂಪನ್ಮೂಲತಾ ವಿವರ, ಅಭ್ಯಾಸದ ವಸ್ತುನಿಷ್ಠ/ನಿಖರ ನಿರ್ಣಯ ಬಹುವಿಧದ ಪ್ರಶ್ನೆಗಳನ್ನು ಅಭ್ಯಾಸಕ್ಕೆ ನೀಡಿದೆ. ಅಲ್ಲದೇ ಕಲಿತ ಪಾಠದ ಸಾರನಿರ್ಣಾಯಕತೆಯನ್ನು ಬಹುವಿಧದಿಂದ ಪರೀಕ್ಷಿಸಿ ಕಲಿಕಾರ್ಥಿಯ ಜ್ಞಾನ ಸಂವರ್ಧನೆಗೆ ಅವಕಾಶ ಮಾಡಿಕೊಡುವುದೇ ಇದರ ಮುಖ್ಯ ಆಶಯ. ಸ್ವಸಾಮರ್ಥ್ಯ, ಸ್ವಪ್ರಯೋಗಶೀಲತೆ, ಸ್ವಸೃಜನಶೀಲತೆ, ಸ್ವಸಂವಹನಶೀಲ ಗುಣಗಳು ಸಹಜವಾಗಿ ಹೆಚ್ಚುತ್ತವೆ.

ನಿಗದಿತ ಮೂಲಪಾಠವನ್ನು ಅರ್ಥೈಸುವ ಅನುಕ್ರಮಣಿಕೆ ಇಂತಿದೆ. ಅರ್ಥೈಸಿ – ಓದಿ, ಕರ್ತೃ – ಭಾವ – ಆಕರ, ಪದ – ಅರ್ಥ, ಪಠ್ಯಾಧಾರ ಟಿಪ್ಪಣಿ, ಪಠ್ಯಾಧಾರ ಪೂರಕ ವಿಶೇಷಾಂಶ ಕಲಿತಪಠ್ಯದ ಪ್ರೇರಣಾ ಅಭ್ಯಾಸ, ಭಾಷಾಭ್ಯಾಸ, ಪ್ರಾಯೋಗಿಕ ಅಭ್ಯಾಸ ಇತ್ಯಾದಿ ಪಠ್ಯದ ಕ್ರಿಯಾತ್ಮಕ ಒಳತೋಟಿಗಳು. ಅಭ್ಯಾಸ ಪ್ರಾಯೋಗಿಕತೆಯ ವಿವರಗಳ ಮತ್ತು ಪಠ್ಯದ ಗದ್ಯಪಾಠ/ಪದ್ಯಪಾಠಗಳ ಜೋಡಣಾ ಅನುಕ್ರಮಣಿಕೆ ಕಲಿಕಾ ವೈಜ್ಞಾನಿಕತೆಯ ಹಿನ್ನೆಲೆಯಿಂದ ಜೋಡಿಸಿದೆ. ಸರಳತೆಯಿಂದ ಕ್ಲಿಷ್ಟತೆ – ಕ್ಲಿಷ್ಟತೆಯಿಂದ ಸರಳತೆ ಸೂತ್ರತೆಯ ಹಿಮ್ಮುಕತೆಯಿಂದ ಗದ್ಯ–ಪದ್ಯಪಾಠಗಳ ಜೋಡಣಾ ಅನುಕ್ರಮ ಇಲ್ಲಿನದು. ಪಠ್ಯಸಾರವನ್ನು ಕಲಿಕಾರ್ಥಿಗಳು ಸುಲಭವಾಗಿ ಅರ್ಥೈಸಿಕೊಳ್ಳುವ ದೃಷ್ಟಿಯಿಂದ ನಿಗದಿತ ಪಾಠದ ಬೋಧನಾ ವಿನ್ಯಾಸವನ್ನು ಹೊಸ ಬೋಧನಾ ವಿಧಾನ ಮತ್ತು ವಿಶ್ಲೇಷಣಾ ವಿಧಾನದ ಅಡಿಯಲ್ಲಿ ಪ್ರಸ್ತಾಪಿಸಿದೆ. ಕಲಿಕೆಯ ಮುನ್ನ ಅರ್ಥೈಸಿ – ಓದಿ ಶೀರ್ಷಿಕೆಯಲ್ಲಿ ಗದ್ಯ/ಪದ್ಯದ ಕೆಲವು ವಿಶೇಷ ಪರಿಕಲ್ಪನಾ ಪದಗಳನ್ನು ಓದುವ ಸಲುವಾಗಿ ನೀಡಿದೆ. ಮುಖ್ಯವಾಗಿ ಓದುವಿಕೆಯನ್ನು ಖಚಿತಪಡಿಸುವ ಉದ್ದೇಶ ಇದರದು. ಕಲಿತ ಪಾಠದ ಅಭ್ಯಾಸ ಭಾಗದಲ್ಲಿರುವ ಪ್ರಶ್ನೆಗಳು ಕಲಿಕಾರ್ಥಿಗಳು ಕಲಿಕೆಯಲ್ಲಿ ಸಾಮರ್ಥ್ಯ ಗಳಿಸುವುದಕ್ಕಾಗಿಯೇ ಹೊರತು ಪರೀಕ್ಷೆಯ ಪ್ರಶ್ನಪತ್ರಿಕೆಯ ತಯಾರಿಕೆಗಾಗಿ ಅಲ್ಲ. ಇದೇ ಪ್ರಶ್ನೆಗಳನ್ನು ಪರೀಕ್ಷೆಯಲ್ಲಿ ಮೌಲ್ಯಮಾಪನಕ್ಕಾಗಿ ಕೇಳಲೇಬೇಕೆಂಬ ನಿರ್ಬಂಧವಿಲ್ಲ. ಇಲ್ಲಿ ಒಂದು/ಎರಡು/ಮೂರು/ನಾಲ್ಕು/ಐದು– ಹತ್ತು ವಾಕ್ಯಗಳಲ್ಲಿ ಉತ್ತರಿಸುವ ಪ್ರಶ್ನೆಗಳನ್ನು ಕೇಳಲಾಗಿದೆ. ಅವುಗಳ ಜೋಡಣೆಯಲ್ಲೂ ಸರಳ–ಕ್ಲಿಷ್ಟ ಪರಿಭಾವನೆಯನ್ನು ಅನುಸರಿಸಿದೆ. ಇದು ವಿಷಯ ಗ್ರಹಣದ ಸಲುವಾಗಿಯೇ ಹೊರತು ಪರೀಕ್ಷಾ ಮೌಲ್ಯಮಾಪನದ ಮಾದರಿಗಾಗಿ ಅಲ್ಲ. ಅಂತೆಯೇ ವಸ್ತುನಿಷ್ಠ ನಿರ್ಣಾಯಕ ಪ್ರಶ್ನೆಗಳು ಕಲಿಕಾರ್ಥಿಯ ನಿರ್ದಿಷ್ಟ ಸಾಮರ್ಥ್ಯಕ್ಕೆ ಸಂಬಂಧಿಸಿದ್ದಾಗಿದೆ. ಒಟ್ಟಿನಲ್ಲಿ ಶೈಕ್ಷಣಿಕ ಸಾರೋದ್ದೇಶದ ಪ್ರಣಾಳಿಕೆ ಇದು.

ಪೋಷಕ ಅಧ್ಯಯನ ವಿಭಾಗದಲ್ಲಿ ಐದು ಪಾಠಗಳಿವೆ. ಮಕ್ಕಳಲ್ಲಿ ಗ್ರಹಿಕಾ ಸಾಮರ್ಥ್ಯವನ್ನು ಹೆಚ್ಚಿಸುವ ದೃಷ್ಟಿಯಿಂದ ಈ ಪಾಠಗಳನ್ನು ಸೇರಿಸಲಾಗಿದೆ. ಈ ಐದು ಪಾಠಗಳಿಂದ ಹತ್ತು ಅಂಕಗಳ ಪ್ರಶ್ನೆಗಳನ್ನು ಕೇಳಬೇಕು. ಪ್ರತಿಪಾಠದಿಂದ ತಲಾ ಎರಡು ಅಂಕಗಳ ಪ್ರಶ್ನೆಗಳನ್ನು ಕೇಳಬಹುದು. ಹೀಗೆ ಕೇಳುವಾಗ ಒಂದು ಅಂಕದ ಪ್ರಶ್ನೆಗಳನ್ನು ಅಥವಾ ಎರಡು ಅಂಕಗಳ ಪ್ರಶ್ನೆಗಳನ್ನು ಕೇಳಬಹುದು.

ಪ್ರಸ್ತುತ ಕೈಂಕರ್ಯಕ್ಕೆ ಸಹಕರಿಸಿದ ಪಠ್ಯಪುಸ್ತಕ ರಚನಾಸಮಿತಿಯ ಗೌರವಾನ್ವಿತ ಸದಸ್ಯರೆಲ್ಲರ ಸಮರ್ಪಕ ಸಲಹೆ, ಬೆಂಬಲ, ನೆರವು, ವಿಶ್ವಾಸ ಮತ್ತು ಆದರತೆ ಮನನೀಯ. ಅಲ್ಲದೆ ಸಿರಿ ಕನ್ನಡ–೧೦ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕ ರಚನಾ ಸಮಿತಿಯ ಆದರಣೀಯ ಸದಸ್ಯರೆಲ್ಲರ ಹಾಗೂ ಪರಿಶೀಲಕರ ಸಹಕಾರ, ಸಹಾಯ ಮತ್ತು ಶೈಕ್ಷಣಿಕ ಬೆಂಬಲ ಸಮಯೋಚಿತ ಅಂತೆಯೇ ಮೌಲಿಕ. ಇಲಾಖೆಯ ವ್ಯವಸ್ಥಾಪಕ ನಿರ್ದೇಶಕ ಶ್ರೀ. ವೈ.ಟಿ. ಗುರುಮೂರ್ತಿ, ವ್ಯವಸ್ಥಾಪಕ ಸಂಯೋಜಕ ಪ್ರೊ. ಮುಡಂಬಡಿತ್ತಾಯ ಅವರ ಸಮಯೋಚಿತ ಸಲಹೆ, ಮಾರ್ಗದರ್ಶನ ಮಹತ್ವದ್ದು. ಸಂಯೋಜಕ ಶ್ರೀ ಪಾಂಡುರಂಗ ಅವರ ಒತ್ತಾಸೆ, ಜವಾಬ್ದಾರಿಯುತ ಕಾಳಜಿ ಮತ್ತು ವಿಶ್ವಾಸ ಪೂರ್ವಕ ಅಭಿಮಾನ ವಿಶೇಷ. ಇವರೆಲ್ಲರಿಗೂ ಸಮಿತಿಯ ಪರವಾಗಿ ಆತ್ಮ ಪೂರ್ವಕ ಧನ್ಯವಾದಗಳು.

ಸಿರಿ ಕನ್ನಡ – ೯ ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕದ ರಚನಾಸಮಿತಿಯ ಪರಿಶೀಲಕರಾದ ಗೌರವಾನ್ವಿತ ಡಾ. ಶ್ರೀಪಾದ ಭಟ್, ಅವರ ಹಾಗೂ ಸಂಪಾದಕಮಂಡಳಿಯ ಮಾನ್ಯ ಸದಸ್ಯರುಗಳಾದ ಹಿರಿಯರೂ ಗೌವಾನ್ವಿತರೂ ಆದ ಪ್ರೊ ಸಾ.ಶಿ. ಮರುಳಯ್ಯ, ಪ್ರೊ.ಅ.ರಾ.ಮಿತ್ರ, ಪ್ರೊ. ಕೆ. ಮರುಳಸಿದ್ದಪ್ಪ, ಪ್ರೊ. ಚಂದ್ರಶೇಖರಪಾಟೀಲ್ ಮತ್ತು ಡಾ. ವಿಷ್ಣು ಎಂ.ಶಿಂದೆ ಅವರ ಸೂಕ್ತ ಮಾರ್ಗದರ್ಶಿ ಪರಿಶೀಲನಾ ಸಲಹೆ, ಸೂಚನೆಗಳು ಪುಸ್ತಕದ ಮೌಲಿಕತೆಗೆ ಪೋಷಕವಾಗಿವೆ. ಗಂಭೀರ ಚಿಂತನಾಯುಕ್ತ ಮಾತುಗಳು ಸೂಕ್ತ ಹಾಗೂ ಮೌಲಿಕ. ಅಂತೆಯೇ ಶಿಕ್ಷಕ ಮಹಾವಿದ್ಯಾಲಯಗಳಿಂದ ಬಂದಿರುವ ಹಿಮ್ಮಾಹಿತಿ ಸೂಕ್ತ ಹಾಗೂ ಸಮಂಜಸ. ಯುಕ್ತಾಯುಕ್ತತೆಯ ಹಿನ್ನೆಲೆಯಲ್ಲಿ ಅವನ್ನು ಗಮನಿಸಿದೆ. ಅದಕ್ಕಾಗಿ ಪಠ್ಯಪುಸ್ತಕ ರಚನಾ ಸಮಿತಿಯ ಪರವಾಗಿ ಅವರಿಗೆ ಗೌರವಪೂರ್ವಕ ಧನ್ಯವಾದಗಳು. ಈ ಪಠ್ಯಪುಸ್ತಕದ ರಚನೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಕರ್ನಾಟಕ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳಿಗೂ  ಸಂಯೋಜಕರಿಗೂ ಮತ್ತು ಕಲಾವಿದರಿಗೂ ಆದರಪೂರ್ವಕ ವಂದನೆಗಳು.



**ಡಾ. ಸಿ. ಎಸ್. ರಾಮಚಂದ್ರ**

ಅಧ್ಯಕ್ಷ,

ಸಿರಿ ಕನ್ನಡ–೯

ಪಠ್ಯಪುಸ್ತಕ ರಚನಾ ಸಮಿತಿ

# ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು**

**ಡಾ. ಸಿ.ಎಸ್. ರಾಮಚಂದ್ರ,** ಪ್ರಾಧ್ಯಾಪಕ ಮತ್ತು ಮುಖ್ಯಸ್ಥ, ಕನ್ನಡ ಭಾಷಾವಿಜ್ಞಾನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–೦೬

**ಸದಸ್ಯರು**

**ಡಾ. ಎಸ್. ಪ್ರಸಾದಸ್ವಾಮಿ,** ಮುಖ್ಯಸ್ಥ ಮತ್ತು ಸಹಪ್ರಾಧ್ಯಾಪಕ, ಕನ್ನಡ ವಿಭಾಗ, ಸರ್ಕಾರಿ ಪ್ರಥಮದರ್ಜೆಕಾಲೇಜು, ಯಲಹಂಕ, ಬೆಂಗಳೂರು–೬೪

**ಡಾ. ಮುಳುಕುಂಟೆ ರಮೇಶ್,** ಸಹಅಧ್ಯಾಪಕ, ರಾಗಿಗುಡ್ಡ ಪ್ರೌಢಶಾಲೆ, ೯ನೆಯ ಬ್ಲಾಕ್ ಜಯನಗರ, ಬೆಂಗಳೂರು–೬೯.

**ಶ್ರೀ ಬಿ. ಬಾಲಕೃಷ್ಣಯ್ಯ,** ಸಹಅಧ್ಯಾಪಕ, ಸರ್ಕಾರಿ ಪ್ರೌಢಶಾಲೆ, ಬೋಗಾದಿ, ಮೈಸೂರು ತಾಲೂಕು.

**ಶ್ರೀ ಸಿ. ಎಸ್. ಬನಶಂಕರಯ್ಯ,** ನಿವೃತ್ತ ಅಧ್ಯಾಪಕ, ಅಶೋಕನಗರ, ಬನಶಂಕರಿ ೧ನೆಯ ಹಂತ, ಬೆಂಗಳೂರು–೫೦.

**ಶ್ರೀಮತಿ ಆರ್.ಪಿ. ಚೇತನಾ,** ಮುಖ್ಯಶಿಕ್ಷಕಿ, ಸರ್ಕಾರಿ ಪ್ರೌಢಶಾಲೆ, ಮಾಗುಂಡಿ ಎನ್.ಆರ್.ಪುರ ತಾಲೂಕು.

**ಪರಿಶೀಲಕರು**

**ಡಾ. ಶ್ರೀಪಾದ ಭಟ್,** ಸಹಾಯಕ ಪ್ರಾಧ್ಯಾಪಕ, ಡಾ.ಡಿ.ವಿ.ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು.

***ಸಂಪಾದಕ ಮಂಡಳಿ ಸದಸ್ಯರು***

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ, ಬೆಂಗಳೂರು–೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೫೭, ೧೨ನೆಯ ಕ್ರಾಸ್, ಜೆ.ಪಿ. ನಗರ, ಬೆಂಗಳೂರು–೭೮

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

**ಮುಖ್ಯ ಸಂಯೋಜಕರು**

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

***ಸಲಹೆ ಮತ್ತು ಮಾರ್ಗದರ್ಶನ***

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೫೬೦ ೦೮೫

**ಕಾರ್ಯಕ್ರಮ ಸಂಯೋಜಕರು**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

# ಪಠ್ಯಪ್ರಧಾನ ಅಧ್ಯಯನ

## ಪಾಠಾನುಕ್ರಮಣಿಕೆ

## ಗದ್ಯಪಾಠ – ೦೧

# ಪಂಥಾಹ್ವಾನ

[ಹಳಗನ್ನಡ]

– ಶಿವಕೋಟ್ಯಾಚಾರ್ಯ

**ಮುನ್ನುಡಿ**

ವಡ್ಡಾರಾಧನೆಯು ಹತ್ತೊಂಬತ್ತು ಕಥೆಗಳಿಂದ ಕೂಡಿದ್ದು ಅನೇಕ ಉಪಕಥೆಗಳಿಂದ ಕೂಡಿದ ಬೃಹತ್ ಕಥಾಗುಚ್ಛ. ವಡ್ಡಾರಾಧನೆ ಎಂದರೆ 'ವೃದ್ಧರ ಆರಾಧನೆ' ಎಂದರ್ಥ. ಕಥೆಗಳ ನಾಯಕರೆಲ್ಲ ಧರ್ಮವೀರರು. ತಪಸ್ಸಿಗೆ ಕುಳಿತಿರುವ ಯತಿಗಳಿಗೆ, ಮನುಷ್ಯ, ಪ್ರಾಣಿ ಹಾಗೂ ಜಡವಸ್ತುಗಳಿಂದ ನಾನಾ ಬಗೆಯ ತೊಂದರೆಗಳಾಗುತ್ತವೆ. ಅಲ್ಲದೆ ಹಸಿವು, ನೀರಡಿಕೆ, ಪಿತ್ತ–ವಾತ ಮುಂತಾದ ಬಾಧೆಗಳು ಎದುರಾಗುತ್ತವೆ!. ತಪಸ್ಸಿಗೆ ಕುಳಿತವರು ಇವನ್ನೆಲ್ಲ ಸಹಿಸಿಕೊಳ್ಳಬೇಕು. ಅವರಲ್ಲಿ ಸಹಾನಾ ಶಕ್ತಿಯನ್ನು ಮೂಡಿಸಲು ಹಿರಿಯ ಯತಿಗಳಿಂದ ಕಥೆಗಳನ್ನು ಹೇಳಿಸುತ್ತಿದ್ದರು. ಆ ಹಿನ್ನೆಲೆಯಲ್ಲಿ ಮೂಡಿಬಂದ ಕಥೆಗಳಲ್ಲಿ ವಡ್ಡಾರಾಧನೆಯ ಕಥೆಗಳು ಜನಪ್ರಿಯ ಹಾಗೂ ಪ್ರಮುಖವಾದುವು. ಈ ಕೃತಿಯಿಂದ ಆಯ್ದ ಕಥೆಯೇ ನಿಗದಿತ ಪಠ್ಯ.

ಪಂಥಾಹ್ವಾನ ಕಥೆಯ ಮೂಲಕ ಹಳಗನ್ನಡ ಸಾಹಿತ್ಯದ ಪರಿಚಯ ಮಾಡಿಸುವುದು ಮೂಲ ಉದ್ದೇಶ. ಶಿವಕೋಟ್ಯಾಚಾರ್ಯ ಅವರ ಗದ್ಯಶೈಲಿ ಸಂಸ್ಕೃತ ಮಿಶ್ರಿತ ಪದಸಂಪತ್ತುಳ್ಳದ್ದು. ಕನ್ನಡ ನಾಡಿನ ಪ್ರಾಚೀನಸಂಸ್ಕೃತಿ, ರಾಜ್ಯಾಡಳಿತವ್ಯವಸ್ಥೆ, ತಪ್ಪು ಮಾಡಿದವರನ್ನು ಶಿಕ್ಷಿಸುವ ಮತ್ತು ತಿದ್ದುವ ವಿಧಾನ, ಶಾಂತಿ, ಸಹನೆ ಇತ್ಯಾದಿ ಜೀವನ ಮೌಲ್ಯಗಳ ಪ್ರಸ್ತಾಪವೇ ಪ್ರಸ್ತುತ ಪಾಠದ ಆಶಯ.



## ಅರ್ಥೈಸಿ – ಓದಿ

| | | | | |
|---|---|---|---|---|
| ಪೊೞಲ್ | ಸುರಖಂ | ಕರಪಟ | ಉಳಿಸೆಂಡು | ಸಂತಾನ |
| ತಳಾರಂಗೆ | ಪರಮಂಡಲ | ದ್ರೋಣಾಮುಖ | ಪ್ರತಿಪಾಲಿಸು | ಕಪ್ಪಡ |
| ಪಾಂಗು | ಪಡಿಯಱಿ | ಪರಿವೊಟ್ಟೆಯವರ್ | ಮನೆವಾೞ್ತೆ | ಪೊಡೆಮಡು |

## ನಿಗದಿತ ಮೂಲ ಹಳಗನ್ನಡ – ಗದ್ಯ

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ತಿಲಕಮನೆ ಪೋಲ್ವುದು ದಕ್ಷಿಣಾಪಥದೊಳಾಭೀರಮೆಂಬುದು ನಾಡಲ್ಲಿ ವರ್ಣೆಯೆಂಬ ತೊಱೆಯಾ ತಡಿಯೊಳ್ ವೇಣಾತಟಮೆಂಬುದು ಪೊೞಲದು ಪೊೞಲ ಗುಣಂಗಳಿನಾದಮಾನುಂ ರಮ್ಯಮಪ್ಪುದು ಸ್ವರ್ಗಮನೆ ಪೋಲ್ವುದದನಾಳ್ವೊಂ ಜಿತಶತ್ರುವೆಂಬೊನರಸನಾತನ ಮಹಾದೇವಿ ವಿಜಯಮತಿಯೆಂಬೊಳಾ ಇರ್ವರ್ಗ್ಗಂ ಮಗನೆನಾಂ ವಿದ್ಯುಚ್ಚೋರನೆಂಬೆಂ ಮತ್ತಾ ಪೊೞಲೊಳ್ ಯಮಪಾಶನೆಂಬೊಂ ತಳಾಱನಾತನ ಪೆಂಡತಿ ನಿಜಗುಣದೇವತೆಯೆಂಬೊಳಾ ಇರ್ವರ್ಗ್ಗಂ ಮಗನೀತಂ ಯಮದಂಡನೆಂಬೊಂ ಮತ್ತಾಮಿರ್ವರುಂ ಸಮಾನವಯಸರೆಮಯ್ದಾಱು ವರ್ಷದ ಪ್ರಾಯದಂದು ಶ್ರಾವಕನಪ್ಪ ಸಿದ್ಧಾರ್ಥನೆಂಬುಪಾಧ್ಯಾಯನ ಪಕ್ಕದೆ ಇರ್ವರುಮನೋದಲಿಟ್ಟೊಡೇೞೆಂಟುವರುಷದೊಳಗೆ ವ್ಯಾಕರಣಂ

ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯಂ ನಾಟಕಂ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು ಬಟಿಕ್ಕೀತಂ ತಳಾರನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳರನಾರಯ್ವ ತೆಱನಂ ಪೇೞ್ವ ಸುರಖಮೆಂಬೋದಂ ಕಲ್ತೊನಾನುಂ ಕಳ್ವುಪಾಯಮಮಂ ಪೇೞ್ವ ಕರಪಟ ಶಾಸ್ತ್ರಮಂ ಕಲ್ತೆನಿಂತೆಮಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

ಮತ್ತೊಂದು ದಿವಸಮಿರ್ವರುಂ ವನಕ್ರೀಡೆಯಾಡಲೆಂದಿಂದ್ರೋಪಮುವೆಂಬ ವನಕ್ಕೆ ಪೋಗಿಯಲ್ಲಿಯಶೋಕ ಪುನ್ನಾಗ ವಕುಳ ತಿಳಕ ತಮಾಳ ಚಂಪಕ ಮೊದಲಾಗೊಡೆಯ ಪಲವುಂ ತೆಱದ ವೃಕ್ಷಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನವನದೊಳಿರ್ವರುಮುಳಿಸೆಂಡನಾಡುತ್ತಿರೆ ಲೋಕನ ವಿದ್ಯೆಯನೀತಂ ಕಲ್ತನಪ್ಪುದಱಿಂದೆಲ್ಲಿಯುಮಿಳಿದೊಡಂ ಕಾಣಲಾಗದೀತನಂ ನೀಡುಮಱಿಸಿ ಕಾಣದೆ ದೆಸೆಗೆಟ್ಟು ಬೇಸತ್ತಾನಿಂತೆಂದೆನಕ್ಕುಂ ಮಗನೆ ನೀಂ ತಳಾಱನಪ್ಪಂದು ನಿನ್ನ ಕಾಪಿನೊಳ್ ಕಳ್ದು ನಿನ್ನಂ 'ಕೊಲಿಸ'ದಾಗಳೇನಾಯ್ತೆಂದು ನುಡಿದೊಡೀತನುಮಿಂತೆಂದನಕ್ಕುಂ ಮಗನೆ ನೀನೆನ್ನ ತಳಾಱುಗೆಯ್ವಂದು ಕಳ್ದೊಡೆ ನಿನ್ನಂ ಪಿಡಿದುಡಿಯೆ ಕಟ್ಟಿ ಕಳ್ಳರ ದಂಡಣೆಯಿಂ ದಂಡಿಸದಾಗಳೇನಾಯ್ತೆಂದು ನುಡಿದೊಡೀ ನುಡಿಯಂ ಮಱೆಯಲ್ವೇಡೆಂದಿರ್ವರುಮೋರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲಕಾಲದಿಂದೆನ್ನ ತಂದೆಯೆನಗೆ ರಾಜ್ಯಪಟ್ಟಂಗಟ್ಟಿ ಶ್ರುತಸಾಗರರೆಂಬ ಭಟ್ಟಾರರ ಪಕ್ಕದೆ ತಪಂಬಟ್ಟನೀತನ ತಂದೆಯುಂ ತನ್ನ ಸಂತಾನಮನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ ಮತ್ತಾನುಂ ರಾಜ್ಯಂಗೆಯ್ಯುತ್ತಿರೆ ಈತನುಮಾಪೊೞಲೊಳ್ ತಳಾಱಂಗೆಯ್ಯುತ್ತಿರ್ಕುಮಿಂತು ಸುಖದೊಳಿರ್ವರ್ಗ್ಗಂ ಕಾಲಂಸಲೆ ಮತ್ತೊಂದು ದಿವಸಮೀತಂ ತನ್ನ ಮನದೊಳಿಂತೆಂದು ಬಗೆದನೆನ್ನರಸಂ ಕಳ್ಳನಾನುಮಿ ಪೊೞಲೊಳ್ತಳಾಱುಗೆಯ್ವೆನಿದು ಕಜ್ಜಮೊಳ್ಳಿತ್ತಲ್ತೆಂದೆನಗಂಜಿ ನಾಡಂ ಬಿಟ್ಟು ಬಂದು ನಿಮಗಾಳಾದನಾನುಮೀತನೆನ್ನಾಳ್ವ ನಾಡೆಂಟು ದೆಸೆಯ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನದ್ರೋಣಾಮುಖಂಗಳೊಳಾರಯ್ಸಿಯುಂ ಕಾಣದೆ ಪರಮಂಡಲಂಗಳೊಳಮಾರಯ್ಸಿಯುಂ ಕಾಣದಿಲ್ಲಿಗಾರಯ್ಯಲಟ್ಟಿದೊಡೆ ಚರಪುರುಷರಾರಯ್ದು ಕಂಡು ಬಂದೆನಗಿಂತೆಂದು ಪೇೞ್ದರ್

ದೇವಾ ಮಿಥಿಳೆಯೆಂಬ ಪೊೞಲದನಾಳ್ವೊಂ ವಾಮರಥನೆಂಬರಸಂಗೆ ಯಮದಂಡಂ ಪೋಗಿಯಾಳಾಗಿ ಪೊೞಲ ಕಾಪಂಬೆತ್ತು ತಳಾರನಾಗಿ ಸುಖದೊಳಿರ್ದೊನೆಂದು ಪೇೞ್ದೊಡಾ ಮಾತನಾಂ ಕೇಳ್ದು ಪುರುಷೋತ್ತಮನೆಂಬ ಮಂತ್ರಿಗೆ ಮಿಥಿಳೆಯೆಂಬ ಪೊೞಲ್ಗಾನಾರುಮಱಿಯದಂತಿರೆ ಪೋಗಿ ಯಮದಂಡನನೊಡಗೊಂಡು ಬಂದಪೆನೆಂದು ಪೇೞ್ದು ವಜ್ರಸೇನನೆಂಬ ಪೆರ್ಗಡೆಯಂ ಕರೆಯಿಸಿ ಆನೊಂದು ಮನೆವಾೞ್ತೆಗೆ ಪೋಗಿ ಬಂದಪೆನೆನ್ನ ಬರ್ಪನ್ನೆಗಂ ರಾಜ್ಯಮಂ ಪ್ರತಿಪಾಲಿಸುತ್ತಿರೆಂದು ಕಲ್ಪಿಸಿ ಸಮಸ್ತ ರಾಜ್ಯಭಾರಮಂ ಸಮರ್ಪಿಸಿ ಅರ್ಧರಾತ್ರಾದಾಗಳ್ ಕಪ್ಪಡಮಂ ಪಱಿದುಟ್ಟು ಬಟಿಕಾರುಮಱಿಯಲೀಯದೊರ್ವನೆ ಪೊಱಮಟ್ಟು ಬಂದೀಪೊೞಲಂ ಪೊಕ್ಕು ಪ್ರತಿಜ್ಞೆ ಕಾರಣಮಾಗಿ ಕಸವರಮಂ ಕಳ್ದೀತನಂ ಕೊಲಿಸುವಂತು ಮಾಡಿದೆನಿದು ಕಳ್ದುದರ್ಕೆ ಕಾರಣಮೀತನುಮೆನಗೀ ಪಾಂಗಿನೊಳ್ ಮಿತ್ರನೆಂದು ಪೇೞ್ದು

ತದನಂತರಂ ಇರ್ವರ್ ಪರಿವೊಟ್ಟೆಯವರೋಲೆಯಂ ಕೊಂಡು ಬಂದರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡರಸನನುಮತದಿಂದರಮನೆಯಂ ಪೊಕ್ಕಾಸ್ಥಾನ ಮಂಟಪದೊಳಿರ್ದ ವಿದ್ಯುಚ್ಚೋರನಂ ಕಂಡು ಪೊಡೆವಟ್ಟಾತನ ಮುಂದೋಲೆಯನಿಕ್ಕಿದಾಗಳ್ ಸಂಧಿವಿಗ್ರಹಿ ಓಲೆಯಂ ಕೊಂಡರಸನ ಮುಂದಿಂತೆಂದು ಬಾಚಿಸಿದಂ ವಿದ್ಯುಚ್ಚೋರ ಪರಮಸ್ವಾಮಿಗೆ ಮಂತ್ರಿ ಪುರುಷೋತ್ತಮನುಂ ಪೆರ್ಗಡೆ

ವಜ್ರಸೇನನುಂ ಸಾಷ್ಟಾಂಗವೆಱಗಿ ಪೊಡೆವಟ್ಟು ಕಾರ್ಯಮಂ ಬಿನ್ನವಿಪ್ಪರ್ ತಾಮುಂ ಪಲವು ದಿವಸಂ ಪೋಗಿರ್ದರ್ಪೆಱತಣ ಮನೆವಾಟ್ತಿಂಯುಂ ಮಱೆದಿರ್ದರ್ ತಾಮಿಲ್ಲದೆ ರಾಜ್ಯಮುಂ ಪ್ರತಿಪಾಲಿಸುವೊರಾರುಮಿಲ್ಲೀಯೋಲೆಯಂ ಕಾಣಲೊಡಂ ತಡೆಯದೆ ಪೊಱಮಟ್ಟು ಬೇಗಂ ಬರ್ಕೆಂದು ಬಾಚಿಸಿದುದಂ ವಾಮರಥಂ ಕೇಳ್ದು ಮುನ್ನೀತನ ಪೇಳ್ದುದುಮೋಲೆಯ ಮಾತುಮೊಂದಾದುದೆಂದು ಸಂದೇಹಮಿಲ್ಲದಾಗಳ್ ನಂಬಿ ಈತಂ ಮಂಡಳಿಕನೆಂದಱೆದು ತನ್ನ ಸಿಂಹಾಸನದೊಳೋರಂತ ಪ್ಪಾಸನಮನಿಕ್ಕಲ್ವೇಟ್ದಿರಿಸಿದಂ

## ಪದ ವಿಂಗಡಣಾ ಓದು

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ + ತಿಲಕಮನೆ ಪೋಲ್ವುದು ದಕ್ಷಿಣಾಪಥದೊಳ್ + ಆಭೀರಮ್ + ಎಂಬುದು ನಾಡು + ಅಲ್ಲಿ ವರ್ಣೆ + ಎಂಬ ತೊರೆ + ಆ ತಡಿಯೊಳ್ ವೇಣಾತಟಮ್ + ಎಂಬುದು ಪೊಟ[ಳ]ಲ್ + ಅದು ಪೊಟ[ಳ]ಲ ಗುಣಂಗಳಿಮ್ + ಆದಮಾನುಂ ರಮ್ಯಮ್ + ಅಪ್ಪುದು ಸ್ವರ್ಗಮನೆ + ಪೋಲ್ವುದು ಅದನ್ + ಆಳ್ವೊಂ ಜಿತಶತ್ರು + ಎಂಬೊನ್ + ಅರಸನ್ + ಆತನ ಮಹಾದೇವಿ ವಿಜಯಮತಿ + ಎಂಬೊಳ್ + ಆ ಇರ್ವರ್ಗ್ಗಂ ಮಗನ್ + ನಾಂ ವಿದ್ಯುಚ್ಚೋರನ್ + ಎಂಬೆಂಮತ್ತೆ + ಆ ಪೊಟ[ಳ]ಲೊಳ್ ಯಮಪಾಶನ್ + ಎಂಬೊಂ ತಳಾಱ[ರ]ನ್ + ಆತನ ಪೆಂಡತಿ ನಿಜಗುಣದೇವತೆ + ಎಂಬೊಳ್ + ಆ ಇರ್ವರ್ಗ್ಗಂ ಮಗನ್ + ಈತಂ ಯಮದಂಡನ್ + ಎಂಬೊಂ ಮತ್ತೆ + ಆಮ್ + ಇರ್ವರುಂ ಸಮಾನ ವಯಸರೆಮ್ + ಅಯ್ದು + ಆಱು[ರು] ವರ್ಷದ ಪ್ರಾಯದ + ಅಂದು ಶ್ರಾವಕನ್ + ಅಪ್ಪ ಸಿದ್ಧಾರ್ಥನ್ + ಎಂಬ + ಉಪಾಧ್ಯಾಯನ ಪಕ್ಕದೆ ಇರ್ವರುಮನ್ + ಓದಲ್ + ಇಟ್ಟೊಡೆ ಏಟು + ಎಂಟು ವರುಷದ + ಒಳಗೆ ವ್ಯಾಕರಣಂ ಪ್ರಮಾಣಂ ಛಂದಮ್ + ಅಲಂಕಾರಂ ನಿಘಂಟು ಕಾವ್ಯಂ ನಾಟಕಂ ಮೊದಲಾಗೊಡೆಯ ಶಾಸ್ತ್ರಂಗಳನ್ + ಎಲ್ಲಮನ್ + ಇರ್ವರುಂ ಕಲ್ತು ಬಟೆ(ಳಿ)ಕ + ಈತಂ ತಳಾಱ[ರ]ನ ಮಗನ್ + ಅಪ್ಪುದಱೆ[ರಿ]ಂ ತನಗೆ ತಕ್ಕ ಕಳ್ಳರನ್ + ಆರಯ್ವ ತೆಱ[ರ]ನಂ ಪೇಟ್ವ[ಳ್ವ]ಸುರಖಂ + ಎಂಬ + ಓದಂ ಕಲ್ತೊನ್ + ಆನುಂ ಕಳ್ವ + ಉಪಾಯಮಂ ಪೇಟ್ವ[ಳ್ವ] ಕರಪಟ ಶಾಸ್ತ್ರಮಂ ಕಲ್ತೆನ್ + ಇಂತು ಎಮಗೆ + ಅನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

ಮತ್ತೆ + ಒಂದು ದಿವಸಮ್ + ಇರ್ವರುಂ ವನಕ್ರೀಡೆ + ಆಡಲ್ + ಎಂದು ಇಂದ್ರೋಪಮಮ್ + ಎಂಬ ವನಕ್ಕೆ ಪೋಗಿ + ಅಲ್ಲಿಯ + ಅಶೋಕ ಪುನ್ನಾಗ ವಕುಳ ತಿಳಕ ತಮಾಳ ಚಂಪಕ ಮೊದಲ್+ಆಗೊಡೆಯ ಪಲವುಂ ತೆಱ[ರ]ದ ವೃಕ್ಷಜಾತಿಗಳಿಂದಂ ಕಿಕ್ಕಿಱೆ[ರಿ]ಗಿಱೆ[ರಿ] ದು+ ಇರ್ದ ನಂದನವನದೊಳ್+ ಇರ್ವರುಮ್ + ಉಳಿಸೆಂಡನ್ + ಆಡುತ್ತ + ಇರೆ ಲೋಕನ ವಿದ್ಯೆಯನ್ + ಈತಂ ಕಲ್ತನ್ + ಅಪ್ಪುದಱೆ[ರಿ]ಂದೆ + ಎಲ್ಲಿ ಉಳಿದೊಡಂ ಕಾಣಲ್ + ಆಗದೆ + ಈತನಂ ನೀಡುಮ್ + ಅಱ[ರ]ಸಿ ಕಾಣದೆ ದೆಸೆ + ಕೆಟ್ಟು ಬೇಸತ್ತು + ಆನ್ + ಇಂತು + ಎಂದೆನ್ + ಅಕ್ಕುಂ ಮಗನೆ ನೀಂ ತಳಾಱ[ರ]ನ್ + ಅಪ್ಪ + ಅಂದು ನಿನ್ನ ಕಾಪಿನ + ಒಳ್ ಕಳ್ದು ನಿನ್ನಂ ಕೊಲಿಸದಾಗಳ್ + ಏನಾಯ್ತು + ಎಂದು ನುಡಿದೊಡೆ + ಈತನುಮ್ + ಇಂತು + ಎಂದನ್ + ಅಕ್ಕುಂ ಮಗನೆ ನೀನ್ + ಎನ್ನ ತಳಾಱು[ರು]ಗೆಯ್ವ + ಅಂದು ಕಳ್ವೊಡೆ ನಿನ್ನಂ ಪಿಡಿದು + ಉಡಿಯೆ ಕಟ್ಟಿ ಕಳ್ಳರ ದಂಡಣೆಯಿಂ ದಂಡಿಸದಾಗಳ್ + ಏನ್ + ಆಯ್ತು + ಎಂದು ನುಡಿದೊಡೆ + ಈ ನುಡಿಯಂ ಮಱೆ[ರೆ]ಯಲ್ +

ಬೇಡ + ಎಂದು ಇರ್ವರುಮ್ + ಓರ್ + ಓರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲಕಾಲದಿಂದ + ಎನ್ನ ತಂದೆ + ಎನಗೆ ರಾಜ್ಯಪಟ್ಟಂ + ಕಟ್ಟಿ ಶ್ರುತಸಾಗರರ್ + ಎಂಬ ಭಟ್ಟಾರರ ಪಕ್ಕದೆ ತಪಂ + ಪಟ್ಟನ್ + ಈತನ ತಂದೆಯುಂ ತನ್ನ ಸಂತಾನಮನ್ + ಈತಂಗೆ ಕೊಟ್ಟು + ಅರಸನೊಡನೆ ತಪಂ + ಪಟ್ಟಂ ಮತ್ತೆ + ಆನುಂ ರಾಜ್ಯಂಗೆಯ್ಯುತ್ತ + ಇರೆ ಈತನುಮ್ + ಆ ಪೊಟೞ[ಳ]ಲ + ಒಳ್ ತಳಾಱ[ರ]ಂ ಗೆಯ್ಯುತ + ಇರ್ಕುಮ್ + ಇಂತು ಸುಖದೊಳ್ + ಇರ್ವರ್ಗ್ಗಂ ಕಾಲಂ ಸಲೆ ಮತ್ತೆ + ಒಂದು ದಿವಸಂ + ಈತಂ ತನ್ನ ಮನದೊಳ್ + ಇಂತು + ಎಂದು ಬಗೆದನ್ + ಎನ್ನ + ಅರಸಂ ಕಳ್ಳನ್ + ಆನುಂ + ಈ ಪೊಟೞ[ಳ]ಲ + ಒಳ್ ತಳಾಱು[ರು]ಗೆಯ್ವೆನ್ + ಇದು ಕಜ್ಜಮ್ + ಒಳ್ಳಿತ್ತು + ಅಲ್ತು + ಎಂದು + ಎನಗೆ + ಅಂಜಿ ನಾಡಂ ಬಿಟ್ಟು ಬಂದು ನಿಮಗೆ + ಆಳ್ + ಆದನ್ + ಆನುಂ + ಈತನ್ + ಎನ್ನ + ಆಳ್ವ ನಾಡ + ಎಂಟು ದೆಸೆಯ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾ ಮುಖಂಗಳೊಳ್ + ಆರಯ್ಸಿಯುಂ ಕಾಣದೆ ಪರಮಂಡಲಗಳೊಳಂ ಆರಯ್ಸಿಯುಂ ಕಾಣದೆ + ಇಲ್ಲಿಗೆ + ಆರಯ್ಯಲ್ + ಅಟ್ಟಿದೊಡೆ ಚರಪುರುಷರ್ + ಆರಯ್ದು ಕಂಡು ಬಂದು + ಎನಗೆ + ಇಂತು + ಎಂದು ಪೇೞ್ದ[ಳ್ದ]ರ್

ದೇವಾ ಮಿಥಿಳೆ + ಎಂಬ ಪೊಟೞ[ಳ]ಲ್ + ಅದನ್ + ಆಳ್ವೊಂ ವಾಮರಥನ್ + ಎಂಬ + ಅರಸಂಗೆ ಯಮ ದಂಡಂ ಪೋಗಿ + ಆಳ್ + ಆಗಿ ಪೊಟೞ[ಳ]ಲ ಕಾಪಂ + ಪೆತ್ತು ತಳಾಱ[ರ]ನ್ + ಆಗಿ ಸುಖದೊಳ್ + ಇರ್ದೊನ್ + ಎಂದು ಪೇೞ್ದೊ[ಳ್ದೊ]ಡೆ + ಆ ಮಾತನ್ + ಆಂ ಕೇಳ್ದು ಪುರುಷೋತ್ತಮನ್ + ಎಂಬ ಮಂತ್ರಿಗೆ ಮಿಥಿಳೆ + ಎಂಬ ಪೊಟೞ[ಳ]ಲ್ಗೆ + ಆನ್ + ಆರುಮ್ + ಅಱೆ[ರಿ]ಯದಂತೆ + ಇರೆ ಪೋಗಿ ಯಮದಂಡನನ್ + ಒಡ + ಕೊಂಡು ಬಂದಪೆನ್ + ಎಂದು ಪೇೞ್ದು[ಳ್ದು] ವಜ್ರಸೇನನನ್ + ಎಂಬ ಪೆರ್ಗ್ಗಡೆಯಂ ಕರೆಯಿಸಿ ಆನ್ + ಒಂದು ಮನೆವಾೞ್ತೆ[ಳ್ತೆ]ಗೆ ಪೋಗಿ ಬಂದಪೆನ್ + ಎನ್ನ ಬರ್ಪ + ಅನ್ನೆಗಂ ರಾಜ್ಯಮಂ ಪ್ರತಿಪಾಲಿಸುತ್ತಿರು + ಎಂದು ಕಲ್ಪಿಸಿ ಸಮಸ್ತ ರಾಜ್ಯಭಾರಮಂ ಸಮರ್ಪಿಸಿ ಅರ್ಧರಾತ್ರಿ + ಆದ + ಆಗಳ್ ಕಪ್ಪಡಮಂ ಪಱೆ[ರಿ]ದು + ಉಟ್ಟು ಬೞೆ[ಳಿ]ಕ ಆರುಮ್ + ಅಱೆ[ರಿ]ಯಲ್ + ಈಯದೆ + ಒರ್ವನೆ ಪೊಱ[ರ]ಮಟ್ಟು ಬಂದು + ಈ ಪೊಟೞ[ಳ]ಲಂ ಪೊಕ್ಕು ಪ್ರತಿಜ್ಞೆ ಕಾರಣಮ್ + ಆಗಿ ಕಸವರಮಂ ಕಳ್ದು + ಈತನಂ ಕೊಲಿಸುವಂತು ಮಾಡಿದೆನ್ + ಇದು ಕಳ್ದುದರ್ಕೆ ಕಾರಣಮ್ + ಈತನುಮ್ + ಎನಗೆ + ಈ ಪಾಂಗಿನೊಳ್ ಮಿತ್ರನ್ + ಎಂದು ಪೇೞ್ದು[ಳ್ದು]

ತತ್ + ಅನಂತರಂ ಇರ್ವರ್ ಪರಿವೊಟ್ಟೆಯವರ್ + ಓಲೆಯಂ ಕೊಂಡು ಬಂದು + ಅರಸನ ಮನೆಯ ಬಾಗಿಲೊಳ್ ನಿಂದು ಪಡಿಯಱ[ರ]ಂಗೆ ಪೇೞ್ದೊ[ಳ್ದೊ]ಡೆ ಅರಸನ + ಅನುಮತದಿಂದ + ಅರಮನೆಯಂ ಪೊಕ್ಕು + ಆಸ್ಥಾನ ಮಂಟಪದೊಳ್ + ಇರ್ದ ವಿದ್ಯುಚ್ಚೋರನಂ ಕಂಡು ಪೊಡೆವಟ್ಟು + ಆತನ ಮುಂದೆ + ಓಲೆಯನ್ + ಇಕ್ಕಿದ + ಆಗಳ್ ಸಂಧಿವಿಗ್ರಹಿ ಓಲೆಯಂ ಕೊಂಡು + ಅರಸನ + ಮುಂದೆ + ಇಂತು + ಎಂದು ಬಾಚಿಸಿದಂ ವಿದ್ಯುಚ್ಚೋರ ಪರಮಸ್ವಾಮಿಗೆ ಮಂತ್ರಿ ಪುರುಷೋತ್ತಮನುಂ

ಪೆರ್ಗಡೆ ವಜ್ರಸೇನನುಂ ಸ + ಅಪ್ಪ + ಅಂಗಂ + ಎಱ[ರ]ಗಿ ಪೊಡೆವಟ್ಟು ಕಾರ್ಯಮಂ ಬಿನ್ನವಿಪ್ಪರ್ ತಾಮುಂ ಪಲವು ದಿವಸಂ ಪೋಗಿ + ಇರ್ದರ್ ಪೞ[ರ]ತಣ ಮನೆವಾೞ್ತೆ[ಳ್ತೆ]ಯಂ ಮಱೆ[ರೆ]ದು ಇರ್ದರ್ ತಾಮ್ + ಇಲ್ಲದೆ ರಾಜ್ಯಮಂ ಪ್ರತಿಪಾಲಿಸುವೊರ್ + ಆರುಮ್ + ಇಲ್ಲ + ಈ + ಓಲೆಯಂ ಕಾಣಲ್ + ಒಡಂ ತಡೆಯದೆ ಪೊಱ[ರ]ಮಟ್ಟು ಬೇಗಂ ಬರ್ಕುಂ + ಎಂದು ಬಾಚಿಸಿದುದಂ ವಾಮರಥಂ ಕೇಳ್ದು ಮುನ್ನ + ಈತನ ಪೇೞ್ದು[ಳ್ದು]ದುಮ್ + ಓಲೆಯ ಮಾತುಮ್ + ಒಂದು ಆದುದು + ಎಂದು ಸಂದೇಹಮ್ + ಇಲ್ಲದ + ಆಗಳ್ ನಂಬಿ ಈತಂ ಮಂಡಳಿಕನ್ + ಎಂದು + ಅಱೆ[ರಿ]ದು ತನ್ನ ಸಿಂಹಾಸನದೊಳ್ + ಓರಂತೆ + ಅಪ್ಪ + ಆಸನಮನ್ + ಇಕ್ಕಲ್ + ಪೇೞ್ದ್[ಳ್ದು] + ಇರಿಸಿದಂ

## ಪೂರ್ವಕಥೆ

ಬಾಲ್ಯದ ಗೆಳೆಯ ಯಮದಂಡ ಮಿಥಿಳೆಯ ರಾಜ ವಾಮರಥನಲ್ಲಿ ತಳವಾರನಾಗಿ ಸೇರಿಕೊಂಡಿರುವ ವಿಷಯ ತಿಳಿದ ವಿದ್ಯುಚ್ಚೋರ ಹಿಂದಿನ ಪಂಥವೊಂದನ್ನು ನೆನಪಿಸಿಕೊಂಡು ಆತನನ್ನು ಇಕ್ಕಟ್ಟಿಗೆ ಸಿಲುಕಿಸುವ ಸಲುವಾಗಿ ವೇಷಮರೆಸಿಕೊಂಡು ಹೋದ. ಅಲ್ಲಿ ಹಗಲಿನ ಹೊತ್ತು ಕಣ್ಣಿಗೆ ಅಂಜನ ಹಚ್ಚಿಕೊಂಡು ವಿಕಾರಿಯಾಗಿ ಊರೊಳಗೆಲ್ಲ ತಿರುಗಾಡಿ ಭಿಕ್ಷಾಟನೆ ಮಾಡುತ್ತಿದ್ದ. ರಾತ್ರಿ ವೇಳೆ ನಿಜರೂಪ ಧರಿಸಿ ಊರಿನ ಜನರೊಡನೆ ಮಾತುಕತೆ ನಡೆಸುತ್ತಾ ಮಧ್ಯರಾತ್ರಿ ಪಟ್ಟಣದ ಮನೆಮನೆಗಳಿಗೆ ನುಗ್ಗಿ ಕಳ್ಳತನ ನಡೆಸುತ್ತಿದ್ದ. ಒಂದು ರಾತ್ರಿ ಅರಮನೆಯ ಏಳನೆಯ ಮಹಡಿಯಲ್ಲಿ ಭದ್ರವಾಗಿಟ್ಟಿದ್ದ, ರಾಜ ವಾಮರಥನಿಗೆ ಅಚ್ಚುತೇಂದ್ರನಿಂದ ಕೊಡಲ್ಪಟ್ಟ ದಿವ್ಯಾಭರಣವಾದ **ಸರ್ವರುಜಾಪಹಾರ** ಎಂಬ ಹಾರವನ್ನು ಈತ ಅಪಹರಿಸಿದ.

ಮರುದಿನ ಮುಂಜಾನೆ ಆಭರಣವನ್ನು ಕಾಣದೆ ದಿಗಿಲಾದ ವಾಮರಥ ಕಾವಲುಗಾರ ಯಮದಂಡನನ್ನು ಕರೆಸಿ ಕಳ್ಳನನ್ನು ಕೂಡಲೇ ಹುಡುಕಿ ತರುವಂತೆ ಆಜ್ಞಾಪಿಸಿದ. ಇಲ್ಲವಾದರೆ ಘೋರ ಶಿಕ್ಷೆ ವಿಧಿಸುವುದಾಗಿ ಎಚ್ಚರಿಕೆ ನೀಡಿದ. ರಾಜನಿಂದ ಒಂದು ವಾರದ ಗಡುವನ್ನು ಕೇಳಿಪಡೆದ ಯಮದಂಡನಿಗೆ ಆರುದಿನ ಉರುಳಿದರೂ ಕಳ್ಳನನ್ನು ಹಿಡಿಯಲಾಗಲಿಲ್ಲ. ಏಳನೆಯ ದಿನ ಮುಂಜಾನೆ ಊರಿನ ಹಾಳು ದೇವಾಲಯದಲ್ಲಿದ್ದ ವಿಕಾರಿಯೊಬ್ಬ, ವಿದ್ಯಾಧರರು ವಿದ್ಯಾಬಲದಿಂದ ಹಾರುವಂತೆ ಕೆಸರಿನ ಹಳ್ಳವನ್ನು ಹಾರಿದ್ದನ್ನು ಗಮನಿಸಿ, ಆತನೇ ಕಳ್ಳನೆಂದು ನಿರ್ಧರಿಸಿ, ಬಂಧಿಸಿ ಅರಮನೆಗೆ ಎಳೆದೊಯ್ದ.

ತಾನು ಕಳ್ಳನಲ್ಲವೆಂದು ಗೋಗರೆದರೂ ಶಾಸ್ತ್ರಜ್ಞನಾದ ಯಮದಂಡ ಆತನ ಕಪಟವಿದ್ಯೆಯನ್ನು ತಾನೂ ಪ್ರಯೋಗಿಸಿ ತೋರಿಸಿ ರಾಜನಿಗೆ ಮನವರಿಕೆ ಮಾಡಿಕೊಟ್ಟ. ಆತನನ್ನು ಶಿಕ್ಷಿಸುವಂತೆ ರಾಜಾಜ್ಞೆಯಾದಾಗ ಯಮದಂಡ ಅವನನ್ನು ಮನೆಗೆ ಎಳೆದೊಯ್ದು ಮಾಘಮಾಸದ ಒಂಬತ್ತು ರಾತ್ರಿ, ಮೂವತ್ತೆರಡು ವಿಧದ ಘೋರ ಶಿಕ್ಷೆಯಿಂದ ದಂಡಿಸಿದ. ಆದರೆ ವಿಕಾರಿಯು ತಾನು ಕಳ್ಳನಲ್ಲ, ನಿಜ ಕಳ್ಳನನ್ನು ಹಿಡಿಯಲಾಗದೆ ನನ್ನನ್ನು ಶಿಕ್ಷಿಸುತ್ತಿದ್ದಾನೆ ಎಂದು ಹೇಳಿದ. ಹೀಗೆ ಕಳ್ಳನನ್ನು ಹುಡುಕುವ ಪ್ರಯತ್ನದಲ್ಲಿ ವಿಫಲನಾದ ಯಮದಂಡ ಆತನೊಂದಿಗೆ ರಾಜನ ಬಳಿಗೆ ಬಂದು ತನ್ನ ಅಸಹಾಯಕತೆಯನ್ನು ಒಪ್ಪಿಕೊಂಡು, ತನ್ನನ್ನು ಮನಬಂದಂತೆ ಶಿಕ್ಷಿಸಲು ವಿನಂತಿಸಿಕೊಂಡ.

ವಾಮರಥನು ತಳವಾರ ಯಮದಂಡನನ್ನು ಶ್ಮಶಾನದಲ್ಲಿ ಶೂಲಕ್ಕೇರಿಸುವಂತೆ ಆಜ್ಞಾಪಿಸಿದ. ರಾಜನ ಆಜ್ಞೆಯಂತೆ ಸೇವಕರು ಯಮದಂಡನನ್ನು ಗಲ್ಲಿಗೇರಿಸಲು ಸಿದ್ಧತೆ ಮಾಡಿಕೊಳ್ಳುತ್ತಿದ್ದಂತೆ, ಅವರ ಹಿಂದೆ ವಿಕಾರಿಯೂ ಶ್ಮಶಾನಕ್ಕೆ ಹೋಗಿ ಅವರನ್ನು ತಡೆಯುತ್ತಾ ಯಮದಂಡನಿಗೆ ಹಿಂದೆ ಅವರು ಮಾಡಿಕೊಂಡಿದ್ದ ಪಂಥವನ್ನು ನೆನಪಿಸಿ, ಈಗ ಗೆದ್ದವರಾರೆಂದು ಕೇಳಿದ. ಪೂರ್ವ ಘಟನೆಯನ್ನು ನೆನಪಿಸಿಕೊಂಡ ಯಮದಂಡ 'ನೀನು ಗೆದ್ದೆ ನಾನು ಸೋತೆ' ಎಂದು ಒಪ್ಪಿಕೊಂಡ. ತಮ್ಮಿಬ್ಬರನ್ನೂ ದೊರೆಯ ಬಳಿಗೆ ಕರೆದೊಯ್ಯುವಂತೆ ವಿಕಾರಿಯು ಕೋರಿದ. ಅದರಂತೆ ಸೇವಕರು ಅವರನ್ನು ರಾಜನ ಬಳಿಗೆ ಕರೆದುಕೊಂಡು ಹೋದಾಗ ವಾಮರಥ ವಿಕಾರಿಯನ್ನು ವಿಚಾರಣೆ ಮಾಡಿದ. ಆಗ ವಿಕಾರಿಯು ತಮ್ಮೊಳಗೆ ಆದ ಪಂಥದ ಈಡೇರಿಕೆಗಾಗಿ ಇಷ್ಟೆಲ್ಲಾ ತಪ್ಪನ್ನೆಸಗಬೇಕಾಯಿತು, ಅದಕ್ಕಾಗಿ ತನ್ನನ್ನೇ ಶಿಕ್ಷಿಸಬೇಕೆಂದೂ ಇದರಲ್ಲಿ ಗೆಳೆಯ ಯಮದಂಡನ ತಪ್ಪೇನೂ ಇಲ್ಲವೆಂದೂ ಅರಿಕೆ ಮಾಡಿಕೊಂಡ. ಆಗ "ಆತ ನಿನ್ನ ಗೆಳೆಯ ಹೇಗೆ ಆದ? ನಿಮ್ಮೊಳಗಿನ ಪಂಥವೇನು ? ಆತ ನೀಡಿದ ಭಯಾನಕ ಶಿಕ್ಷೆಯನ್ನು ನೀನು ಸಹಿಸಿಕೊಂಡಿದ್ದು ಹೇಗೆ? ಶ್ರಾವಕನಾದ ನೀನು ಕಳ್ಳತನ ನಡೆಸಿದ್ದು ಏಕೆ!?" ಎಂದು ವಾಮರಥನು ಕುತೂಹಲದಿಂದ ಪ್ರಶ್ನಿಸಿದಾಗ ವಿಕಾರಿಯ ರೂಪದಲ್ಲಿದ್ದ ವಿದ್ಯುಚ್ಚೋರ ಹೇಳಿದ ಕತೆಯೇ ಪ್ರಸ್ತುತ ಗದ್ಯಭಾಗ.

## ಕರ್ತೃ – ಭಾವ – ಆಕರ

**ಶಿವಕೋಟ್ಯಾಚಾರ್ಯ** ಅವರು ಕನ್ನಡದ ಪ್ರಥಮ ಗದ್ಯಕೃತಿ ವಡ್ಡಾರಾಧನೆಯ ಕರ್ತೃ. ಕಾಲ ೧೦ನೆಯ ಶತಮಾನದ ಆದಿಭಾಗ (ಕ್ರಿಸ್ತ ಶಕ ಸುಮಾರು ೯೨೦). ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ **ಕೋಗಳಿನಾಡಿನವರು.** ಜೈನಧಾರ್ಮಿಕ ಕಥೆಗಳ ಸಂಗ್ರಹವಾದ **ವಡ್ಡಾರಾಧನೆಯಲ್ಲಿ** ೧೯ ಕಥೆಗಳಿವೆ. ಇದಕ್ಕೆ ಉಪಸರ್ಗ ಕೇವಲಿಗಳ ಕಥೆ ಎಂಬ ಹೆಸರೂ ಇದೆ. ಕಥಾ ಚೌಕಟ್ಟು ಒಂದೇ ರೀತಿಯದಾದರೂ ವೈವಿಧ್ಯವುಂಟು

*　　　　*　　　　*　　　　*

**ವಡ್ಡಾರಾಧನೆ** ಜೈನ ಗದ್ಯಕಾವ್ಯ. ಜಿನದೀಕ್ಷೆ ತೊಟ್ಟವನು ಎಂತಹ ಘೋರ ಕಷ್ಟಗಳನ್ನಾದರೂ ಎದುರಿಸಲು ಬದ್ಧನಾಗಿರಬೇಕು ಎಂಬುದನ್ನು ಇಲ್ಲಿನ ಕಥೆಗಳು ಪ್ರತಿಪಾದಿಸುತ್ತವೆ. ವ್ರತ, ಶೀಲ, ಚಾರಿತ್ರ್ಯ ಗುಣಗಳಿಲ್ಲದವರು, ರಾಗ, ದ್ವೇಷ, ಲೋಭಕ್ಕೊಳಗಾಗಿ ಸುಳ್ಳು ನುಡಿಯುವವರು ದುಃಖ ಪರಂಪರೆಯನ್ನೇ ಎದುರಿಸಬೇಕಾಗುತ್ತದೆ ಎಂದು ಪ್ರತಿಯೊಂದು ಕಥೆಯೂ ಸಾರುತ್ತದೆ. ಸತ್ಯ, ಧರ್ಮ, ಪ್ರಾಮಾಣಿಕತೆಗೆ ಜಯ ದೊರಕುವುದೆಂಬುದನ್ನು **ಪಂಥಾಹ್ವಾನ ಕಥೆ** ಸಾರುವುದು. ವಿದ್ಯುಚ್ಚೋರ–ಯಮದಂಡರು ಗೆಳೆಯರಾಗಿದ್ದೂ ತಮ್ಮ ಪಂಥವನ್ನು ಪೂರೈಸಿಕೊಳ್ಳಲು ಎಂತಹ ಕ್ಲಿಷ್ಟ ಪರೀಕ್ಷೆಗಳನ್ನೆದುರಿಸಿದರೆಂಬುದನ್ನು ಈ ಕಥೆ ತಿಳಿಯಪಡಿಸುವುದು.

*　　　　*　　　　*　　　　*

**ಡಿ.ಎಲ್. ನರಸಿಂಹಾಚಾರ್** ಸಂಪಾದಿಸಿದ **ಶಿವಕೋಟ್ಯಾಚಾರ್ಯ** ವಿರಚಿತ **ವಡ್ಡಾರಾಧನೆ** ಕೃತಿಯ **ವಿದ್ಯುಚ್ಚೋರನೆಂಬ ರಿಸಿಯ ಕಥೆ**ಯಿಂದ ಪ್ರಕೃತ ಭಾಗವನ್ನು ಆರಿಸಿ, ಸಂಪಾದಿಸಿ (ಪುಟ ೧೭೨–೧೭೫) ನಿಗದಿಪಡಿಸಿದೆ.

## ಪದ–ಗದ್ಯಾರ್ಥ

ತಿಲಕ–ಶ್ರೇಷ್ಠ; ತೊಱೆ[ರೆ]–ನದಿ; ಪೊೞ[ಳ]ಲ್–ಪಟ್ಟಣ; ಇರ್ವರ್ಗ್ಗಂ–ಇಬ್ಬರಿಗೂ; ಸಮಾನವಯಸರೆಂ–ಸಮಾನ ವಯಸ್ಸಿನವರಾಗಿದ್ದೇವೆ; ಪುನ್ನಾಗ–ಸುರಗಿಮರ; ವಕುಳ–ಬಕುಳ, ಒಂದು ಜಾತಿಯ ಹೂ, ಚಂಪಕ (ತ್ಸ) – ಸಂಪಗೆ (ದ್ಭ) ಸಂಪಿಗೆ; ತಿಳಕ–ತಿಲಕಪುಷ್ಪ ; ತಮಾಳ–ಹೊಂಗೆ; ಚಂಪಕ–ಸಂಪಿಗೆಯಮರ; ಕಿಕ್ಕಿಱೆ[ರಿ] ಗಿಱೆ[ರಿ] ದಿರ್ದ–ದಟ್ಟವಾಗಿ ತುಂಬಿದ್ದ; ಉಳಿಸೆಂಡಿನಾಟ–ಚೆಂಡನ್ನು ಅಡಗಿಸಿಟ್ಟು ಆಡುವ ಆಟ; ಲೋಕನವಿದ್ಯೆ–ಅದೃಶ್ಯವಾಗುವ ವಿದ್ಯೆ; ಉಳಿದೊಡಂ–ಅಡಗಿಕೊಂಡರೂ; ಕಾಪಿನೊಳ್–ಕಾವಲಿನಲ್ಲಿ, ರಕ್ಷಣೆಯಲ್ಲಿ; ತಳಾಱಂ[ರಂ] ಗೆಯ್ವಂದು–ಕಾವಲುಗಾರನ ಕೆಲಸ ಮಾಡುವಾಗ; ನುಡಿದೊಡೆ–ಪ್ರತಿಜ್ಞೆ ಮಾಡಿದರೆ; ಮೂದಲಿಸಿ–ಹೀಯಾಳಿಸಿ; ಸಂತಾನಮಂ–ವಂಶ ಪರಂಪರೆಯಿಂದ ಬಂದುದನ್ನು, ಕಜ್ಜ–ಕೆಲಸ; ಆರಯ್ಸಿ–ಹುಡುಕಿಸಿ; ಮನೆವಾೞ್ತೆ[ಳ್ತೆ]–ವೈಯಕ್ತಿಕ ಕೆಲಸ; ಎನ್ನಬರ್ಪನ್ನೆಗಂ–ನಾನು ಬರುವವರೆಗೆ; ಪ್ರತಿಪಾಲಿಸು–ಸಂರಕ್ಷಿಸು; ಕಲ್ಪಿಸಿ–ಊಹಿಸಿ; ಕಪ್ಪಡ–ಬಟ್ಟೆ; ಪರಿದು–ಹರಿದು; ಕಸವರ–ಹೊನ್ನು, ಸಂಪತ್ತು; ಪಾಂಗು–ರೀತಿ, ಕ್ರಮ; ಪರಿವೊಟ್ಟೆಯವರ್–ಒಂಟೆಯನ್ನೇರಿಕೊಂಡು ಬರುವ ದೂತರು; ಪೊಡೆವಟ್ಟು–ನಮಸ್ಕರಿಸಿ; ಬಿನ್ನವಿಪ್ಪರ್–ವಿಜ್ಞಾಪಿಸುವರು; ಪಡಿಯಱ[ರ]–ದ್ವಾರಪಾಲಕ; ಬಾಚಿಸಿದಂ–ವಾಚಿಸಿದನು; ಪೆಱ[ರ]ತಣ–ಹಿಂದಿನ, ಮೊದಲಿನ; ಈಯೋಲೆಯುಂ–ಈ ಪತ್ರವೂ; ಈತನು ಪೇೞ್ದು[ಳ್ದು]ದುಮ್–ಇವನು ಹೇಳಿರುವುದು; ಮಂಡಳಿಕ–ಸಾಮಂತ; ಓರಂತಪ್ಪ–ಸಮಾನವಾದ

## ಪಠ್ಯಾಧಾರ ಟಿಪ್ಪಣಿ

**ಸುರಖಿಮೆಂಬೋದಂ** : ಸುರಖಿಶಾಸ್ತ್ರ, ಕಳ್ಳತನವನ್ನು ಪತ್ತೆಹಚ್ಚುವ ಶಾಸ್ತ್ರ.

**ಕರಪಟಶಾಸ್ತ್ರ** : ಚೋರಶಾಸ್ತ್ರ, ಕಳ್ಳತನವನ್ನು ಕಲಿಸಿಕೊಡುವ ಶಾಸ್ತ್ರ,

**ತಳಾಱ** : ತಳವಾರ, ಕಾವಲುಗಾರ

**ಶ್ರಾವಕ** : ಜೈನ ಧರ್ಮೀಯ

**ಗ್ರಾಮ** : ನೂರಕ್ಕೆ ಕಡಿಮೆಯಾಗದ ಕೃಷಿ ಕುಟುಂಬಗಳು ವಾಸ ಮಾಡುವ ಹಳ್ಳಿ.

**ನಗರ** : ರಾಜನು ವಾಸ ಮಾಡುವ ದೊಡ್ಡ ಪಟ್ಟಣ. ಆಡಳಿತದ ಕೇಂದ್ರ ರಾಜಧಾನಿ.

**ಖೇಡ** : ಎತ್ತರವಾದ ಕೋಟೆಯಿಂದ ಆವೃತವಾದ ಊರು.

**ಖರ್ವಡ** : ಚಿಕ್ಕ ಪ್ರಾಕಾರವಿರುವ ಊರು, ನಗರ ಮತ್ತು ಹಳ್ಳಿಯ ಮಧ್ಯಸ್ಥಿತಿಯಲ್ಲಿದ್ದು ಬೆಟ್ಟಗುಡ್ಡಗಳಿಂದ ಸುತ್ತುವರಿದ ಊರು.

**ಮಡಂಬ** : ದೂರಸ್ಥಳ, ಸೀಮೆಯ ಕೊನೆಯಲ್ಲಿರುವ ಪುರ, ಐನೂರು ಹಳ್ಳಿಗಳಿಗೆ ಮುಖ್ಯವಾದ ನಗರ.

**ಪತ್ತನ(ಪಟ್ಟಣ)** : ಬಂಡಿ ಇಲ್ಲವೇ ನಾವೆಗಳಲ್ಲಿ ಪ್ರಯಾಣ ಮಾಡಿ ಸೇರಬಹುದಾದ ಪುರ. ಕೊಲ್ಲಿ

**ದ್ರೋಣಾಮುಖ** : ಜಲಮಾರ್ಗ ಮತ್ತು ನೆಲಮಾರ್ಗಗಳೆರಡನ್ನೂ ಹೊಂದಿರುವ ಪುರ.

**ಸಾಷ್ಟಾಂಗವೆಱ(ರ)ಗು** : ತಲೆ, ದೃಷ್ಟಿ, ಎದೆ, ಕೈ, ಮೊಣಕಾಲು, ಪಾದ, ನೆಲಕ್ಕೆ ಮುಟ್ಟುವಂತೆ ಮಾತು ಮತ್ತು ಮನಃಪೂರ್ವಕ ಮಾಡುವ ನಮಸ್ಕಾರ

**ವಕುಳ** : ಬಕುಳ ಎಂಬ ಹೆಸರಿನ ಹೂ, ರೆಂಬೆ ಹೂ ಎಂತಲೂ ಕರೆಯುತ್ತಾರೆ. ವಿವಾಹ ಸಂದರ್ಭದಲ್ಲಿ ವಧುವರರು ಈ ಹೂವಿನ ಮಾಲೆಯನ್ನು ಪರಸ್ಪರ ಹಾಕುತ್ತಾರೆ.

# ಅಭ್ಯಾಸ

**• ಪೋಷಕ ಅಭ್ಯಾಸ**

**• ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**

**ಅ. ಬಿಟ್ಟ ಜಾಗವನ್ನು ಸೂಕ್ತ ಪದದಿಂದ ತುಂಬಿ**

೧. ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ________ ಪೋಲ್ವುದು ದಕ್ಷಿಣಾಪಥ.

೨. ಅದನಾಳ್ವೊಂ ________ ವೆಂಬೊನರಸನ್.

೩. 'ಪಂಥಾಹ್ವಾನ' ಗದ್ಯಭಾಗದ ಆಕರ ಗ್ರಂಥ ________

೪. ಯಮಪಾಶ ತಳಾರನ ಪತ್ನಿಯ ಹೆಸರು ________

**ಆ. ಹೊಂದಿಸಿ ಬರೆಯಿರಿ**

| | 'ಅ' ಪಟ್ಟಿ | ಆ' ಪಟ್ಟಿ |
|---|---|---|
| ೧. | ವಿದ್ಯುಚ್ಚೋರ | ಸಂಧಿ ವಿಗ್ರಹಿ |
| ೨. | ವಜ್ರಸೇನ | ತಳಾರ |
| ೩. | ವಾಮರಥ | ಮಂತ್ರಿ |
| ೪. | ಯಮದಂಡ | ಕಳ್ಳ |
| ೫. | ಪುರುಷೋತ್ತಮ | ಪೆರ್ಗಡೆ |
| | | ಮಿಥಿಳೆಯ ರಾಜ |
| | | ಖೇಡ |



**• ಪ್ರೇರಣಾ ಅಭ್ಯಾಸ**

**• ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ ಪ್ರಶ್ನೆಗಳು**

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ**

೧. 'ಆಭೀರ' ನಾಡು ಯಾವುದನ್ನು ಹೋಲುತ್ತದೆ?

೨. 'ಸುರಖ' ವಿದ್ಯೆಯ ಮಹತ್ವವೇನು?

೩. ಯಮದಂಡ–ವಿದ್ಯುಚ್ಚೋರ ಇಂದ್ರೋಪವನಕ್ಕೆ ಏಕೆ ಹೋದರು?

೪. ಯಮದಂಡ ಯಾರ ಬಳಿ ತಳಾರನಾದ?

೫. ವಾಮರಥನು ವಿದ್ಯುಚ್ಚೋರನಿಗೆ ಸಿಂಹಾಸನದ ಬಳಿ ಉಚಿತಾಸನವನ್ನಿರಿಸಿದ್ದೇಕೆ?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು/ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಯಮದಂಡ–ವಿದ್ಯುಚ್ಚೋರರು ಕಲಿತ ವಿದ್ಯೆಗಳಾವುವು?

೨. ಇಂದ್ರೋಪವನದ ವೈಶಿಷ್ಟ್ಯವನ್ನು ತಿಳಿಸಿ

೩. ಯಮದಂಡನು ನಾಡನ್ನು ಬಿಟ್ಟು ಹೋದುದೇಕೆ?

೪. ವಿದ್ಯುಚೋರನು ಯಮದಂಡನನ್ನು ಎಲ್ಲೆಲ್ಲಿ ಹುಡುಕಾಡಿದ?

೫. ವಿದ್ಯುಚ್ಚೋರನು ವಜ್ರಸೇನನಿಗೆ ಏನು ಹೇಳಿದ?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ನಾಲ್ಕು/ಆರು ವಾಕ್ಯಗಳಲ್ಲಿ ಉತ್ತರಿಸಿ**

೧. ವಿದ್ಯುಚ್ಚೋರ–ಯಮದಂಡರು ಶಪಥ ಮಾಡಿದ ಸಂದರ್ಭವನ್ನು ವಿವರಿಸಿ.

೨. ವಿದ್ಯುಚ್ಚೋರ ಕಳ್ಳತನ ಮಾಡಲು ಕಾರಣವೇನು ವಿವರಿಸಿ.

**ಈ. ಕೊಟ್ಟಿರುವ ಪ್ರಶ್ನೆಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

ಪಂಥಾಹ್ವಾನ ಕಥೆಯನ್ನು ಸಂಕ್ಷಿಪ್ತವಾಗಿ ಬರೆಯಿರಿ.

**ಉ. ಕೊಟ್ಟಿರುವ ವಾಕ್ಯಗಳ ಸಂದರ್ಭ ಸಹಿತ ಸ್ವಾರಸ್ಯವನ್ನು ಬರೆಯಿರಿ**

೧. "ಅದು ಪೊಟಲ ಗುಣಂಗಳಿನಾದಮಾನುಂ ರಮ್ಯಮಪ್ಪುದು"

೨. "ಎನ್ನ ತಂದೆಯೆನಗೆ ರಾಜ್ಯಪಟ್ಟಂಗಟ್ಟಿ ಶ್ರುತಸಾಗರರೆಂಬ ಭಟ್ಟಾರರ ಪಕ್ಕದೆ ತಪಂಬಟ್ಟನ್"

೩. "ಮುನ್ನೀತನ ಪೇಱ್ದುದುಮೋಲೆಯ ಮಾತುಮೊಂದಾದುದು"



## ಭಾಷಾಭ್ಯಾಸ

- **ಕೊಟ್ಟಿರುವ ಪ್ರಶ್ನೆಗಳನ್ನು ಉತ್ತರಿಸಿ.**

೧. ಆಗಮಸಂಧಿಯ ವಿಧಗಳು ಯಾವುವು? ಉದಾಹರಣೆ ಕೊಡಿ.

೨. ನಾಮಪದ ಎಂದರೇನು? ಉದಾಹರಿಸಿ.

೩. ನಾಮಪದಕ್ಕೂ ಸರ್ವನಾಮಕ್ಕೂ ಇರುವ ವ್ಯತ್ಯಾಸ ಏನು?

೪. –ಗೆ ಮತ್ತು –ಕ್ಕೆ ಯಾವ ವಿಭಕ್ತಿ ಪ್ರತ್ಯಯಗಳು?

೫. ಱ ಮತ್ತು ೞ ಅಕ್ಷರಗಳ ಹೊಸಗನ್ನಡ ರೂಪವೇನು?

- **ಪ್ರಾಯೋಗಿಕ ಭಾಷಾಭ್ಯಾಸ**

**ಅ. ಮೊದಲೆರಡು ಪದಗಳಿಗೆ ಸಂಬಂಧಿಸಿದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದವನ್ನು ಬರೆಯಿರಿ.**

೧. ಪ – ಅಲ್ಪಪ್ರಾಣಾಕ್ಷರ : ಮ ____________

೨. ಗೊತ್ತಿಲ್ಲ – ಲೋಪಸಂಧಿ : ಮಳೆಗಾಲ ____________

೩. ಜ್ಜ – ಸಜಾತೀಯ ಸಂಯುಕ್ತಾಕ್ಷರ : ರ್‍ಯ ____________

೪. ಬೆಟ್ಟ – ರೂಢನಾಮ : ಮಹೇಶ ____________

೫. ಮರ – ಮರಗಳು : ಅಣ್ಣ ____________

**ಆ. ಪಠ್ಯಾಧಾರಿತ ಸೃಜನಶೀಲ ಭಾಷಾ ಬಳಕೆಯ ಪ್ರಾಯೋಗಿಕ ಅಭ್ಯಾಸ**

**ಅ. ಕೊಟ್ಟಿರುವ ಹಳಗನ್ನಡ ಪದಗಳ ಹೊಸಗನ್ನಡ ರೂಪ ಬರೆಯಿರಿ**

ಪೋಲ್ವುದು ಕಲ್ತು ಪೋಗಿ ಬಂದಪೆನೆಂದು

**ಆ. ಕೊಟ್ಟಿರುವ ಪದಗಳನ್ನು ಬಿಂಗಡಿಸಿ ಬರೆಯಿರಿ.**

ಮತ್ತೊಂದು, ದಿವಸಮೀತಂ, ಮನದೊಳಿಂತೆಂದು, ಬಗೆದನೆನ್ನರಸಂ, ಅರ್ಧರಾತ್ರಾದಾಗಳ್, ಪರಿದುಟ್ಟು



## ಪೂರಕ ಓದು

- ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪ್ರಕಟಿಸಿರುವ **ಟಿ. ಕೇಶವಭಟ್ಟ** ಅವರ ಗದ್ಯಾನುವಾದ **ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ** ಕೃತಿಯನ್ನು ಓದಿ.



## ಗದ್ಯಪಾಠ –೨

# ಪ್ರಾಮಾಣಿಕತೆ

[ಆಧುನಿಕ ಸಣ್ಣಕತೆ]

– ಸಾರಾ ಅಬೂಬಕ್ಕರ್

**ಮುನ್ನುಡಿ**

ಗದ್ಯಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಸಣ್ಣಕತೆಯೂ ಒಂದು. ಇದರ ಸ್ವರೂಪ ಮತ್ತು ಲಕ್ಷಣ ಭಿನ್ನವಾದುದು. ಮಾಸ್ತಿ, ಕೆರೂರು, ಗೊರೂರು, ಅನಂತಮೂರ್ತಿ, ಲಂಕೇಶ್, ಅನುಪಮಾ ನಿರಂಜನ, ವೈದೇಹಿ, ಸುಮಂಗಲಾ, ಶ್ಯಾಮಲಾ ಬೆಳಗಾಂವಕರ ಮೊದಲಾದವರು ಕನ್ನಡದ ಮಹತ್ವದ ಕತೆಗಾರರು. ಬದುಕಿನ ವಿವಿಧ ಆಯಾಮಗಳನ್ನು ಪಕ್ಕನೆ ಮಿಂಚಿಸುವ ಸಾಧ್ಯತೆ ಹೊಂದಿರುವ ಸಣ್ಣಕತೆ, ಹೊಸಗನ್ನಡದ ಜನಪ್ರಿಯ ಪ್ರಕಾರ.

ಸಣ್ಣಕತೆಯು ಸಂಸ್ಕೃತಿಯ ಅಭಿವ್ಯಕ್ತಿಗೆ ಪೂರಕ ಮಾಧ್ಯಮ. ಸಮಾಜದ ಏಳಿಗೆ, ಜನರ ಬದುಕು, ಶಿಕ್ಷಣ, ವಿಜ್ಞಾನ, ಕ್ರಾಂತಿ, ಕೃಷಿ ಎಲ್ಲವೂ ಸಣ್ಣಕತೆಗೆ ವಸ್ತುಗಳೇ. ನಗರ ಹಾಗೂ ಗ್ರಾಮೀಣ ಬದುಕು ಸಣ್ಣಕತೆಗಳಲ್ಲಿ ಚಿಂಚಿತವಾಗಿದೆ. ಅಲ್ಲದೇ ಕಾರ್ಯಕ್ಷಮತೆ, ಪ್ರಾಮಾಣಿಕತನ, ಸ್ನೇಹ, ಇವು ಸಾಮಾಜಿಕ ದ್ಯೋತಕ ಎಂಬುದೇ ಪ್ರಕೃತ ಕತೆಯ ಆಂತರ್ಯದ ದನಿ. ವ್ಯವಸ್ಥೆಯ ಅಸಂಭವನೀಯ ಸಂದರ್ಭಗಳು ಶಾಂತಿ, ಸಂತೃಪ್ತಿಗೆ ಸಲ್ಲವು ಎಂಬುದೂ ಕತೆಯ ಇಂಗಿತ.



**ಅರ್ಥೈಸಿ – ಓದಿ**

| | | | | |
|---|---|---|---|---|
| ತಮಾಷೆ | ದಬ್ಬಾಳಿಕೆ | ಮನಮುಟ್ಟು | ಸಮಯಸಾಧಕ | ನಿರ್ದೇಶಕ |
| ಹಾಸ್ಯಾಸ್ಪದ | ದೇಶೋದ್ಧಾರಕ | ಕೋಪೋದ್ರಿಕ್ತ | ಪ್ರಾಮಾಣಿಕ | ಜವಾಬ್ದಾರಿ |

**ನಿಗದಿತ ಮೂಲ ಸಣ್ಣಕತೆ – ಗದ್ಯ**

ಆ ದಿನ ನಗರಕ್ಕೆ ಹೋಗಿದ್ದ ನನಗೆ ಅಕಸ್ಮಾತ್ತಾಗಿ ಗೆಳೆಯ ಹುಸೇನನ ಭೇಟಿಯಾಗಿತ್ತು. "ಬಾ ಹಮೀದ್. ನಿನಗೊಂದು ತಮಾಷೆ ತೋರಿಸುತ್ತೇನೆ" – ಎಂದುಕೊಂಡೇ ಆತ ನನ್ನನ್ನು ಕರೆದೊಯ್ದಿದ್ದ. ಊರ ಮೈದಾನದಲ್ಲಿ ಅಂದು ಬೃಹತ್ ಸಾರ್ವಜನಿಕ ಸಭೆಯೊಂದು ಜರಗುತ್ತಿತ್ತು. ಹಲವಾರು ಸಾಮಾಜಿಕ ಮುಖಂಡರೂ ಧಾರ್ಮಿಕ ಗುರುಗಳೂ ಭಾಗವಹಿಸಿದ್ದರು. ಒಬ್ಬರಿಂದ ಮತ್ತೊಬ್ಬರು ಯಾವ ರೀತಿ ಶೋಷಣೆಗೊಳಗಾಗುವರು, ಬಲಶಾಲಿಗಳು ಬಲಹೀನರನ್ನು ಯಾವ ರೀತಿ ತೊಂದರೆಗೆ ಈಡು ಮಾಡುತ್ತಿದ್ದಾರೆ – ಎಂಬುದನ್ನೆಲ್ಲಾ ಸೇರಿದ ಜನರ ಮನಮುಟ್ಟುವಂತೆ ವಿವರಿಸುತ್ತಿದ್ದರು. ಸಭೆ ಮುಗಿದಾಗ ರಾತ್ರಿ ಎಂಟುಗಂಟೆ ದಾಟಿತ್ತು. ನಮ್ಮೂರಿಗೆ ಹೋಗುವ ಕೊನೆಯ ಬಸ್ಸೂ ಹೊರಟು ಹೋಗಿತ್ತು.

'ಅದಕ್ಕೇಕೆ ಇಷ್ಟು ಯೋಚನೆ? ಬಾ, ಈ ದಿನ ನನ್ನ ಕೋಣೆಯಲ್ಲಿ ಕಳೆದು ನಾಳೆ ಊರಿಗೆ ಹೋದರಾಯಿತು' – ಎಂದು ಹುಸೇನನೆಂದಾಗ ಬೇರೆ ದಾರಿ ಇಲ್ಲದೆ ಆತನನ್ನು ಹಿಂಬಾಲಿಸಿದೆ.

ಬಹಳ ದಿನಗಳ ಬಳಿಕ ಭೇಟಿಯಾದ ಗೆಳೆಯನೊಡನೆ ಒಂದಿಷ್ಟು ಹರಟೆ ಹೊಡೆಯೋಣವೆನಿಸಿತು. 'ಹುಸೇನ್ ನಾನೊಂದು ವಿಚಾರ ಕೇಳಲೇ?' ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ ಕೇಳಿದೆ. ಹಾಸಿಗೆ ಹಾಸಿ, ದಿಂಬನ್ನು ಸರಿಪಡಿಸಿ ನನ್ನೆಡೆಗೆ ಪ್ರಶ್ನಾರ್ಥಕವಾಗಿ ನೋಡುತ್ತಾ 'ಕೇಳು' ಎಂದನು, ಹಾಸಿಗೆಯ ಮೇಲೊರಗುತ್ತಾ

'ಇನ್ನೇನಿಲ್ಲ ಬಲಶಾಲಿಗಳಿಂದ ಬಲಹೀನರು ತೊಂದರೆಗೊಳಗಾಗಿದ್ದಾರೆ ಎಂದೆಲ್ಲ ಕೂರೆದರಲ್ಲ. ಇದು ನಿಜವೇ? ನಾನಂತೂ ಹಳ್ಳಿಯಲ್ಲಿರುವವನು. ನನ್ನ ಮಟ್ಟಿಗೆ ಹೇಳುವುದಾದರೆ ನನಗೆ ಅಂತಹ ಅನುಭವಗಳೇನು ಈವರೆಗೆ ಆಗಿಲ್ಲ. ಇಂದಿಗೂ ನಮ್ಮ ಹೊಲದಲ್ಲಿ ಕೂಲಿ ಕೆಲಸಕ್ಕೆ ಬರುವವರು ಅನ್ಯರೇ. ಅವರಿಂದ ನಮಗಾಗಲಿ, ನಮ್ಮಿಂದ ಅವರಿಗಾಗಲಿ ಈವರೆಗೆ ಏನೂ ತೊಂದರೆಯಾಗಿಲ್ಲ. ನಾವು ಪರಸ್ಪರ ಚೆನ್ನಾಗಿ ಹೊಂದಿಕೊಂಡಿದ್ದೇವೆ. ಆದರೆ ಎಲ್ಲಾ ನಾಯಕರ ಮಾತುಗಳನ್ನು ಕೇಳುವಾಗ ಯಾವುದೋ ಒಂದು ರೀತಿಯ ಅಸ್ಥಿರತೆ ನನ್ನನ್ನು ಬಾಧಿಸುತ್ತದೆ.





ಹುಸೇನನ ಮುಖದ ಮೇಲಿದ್ದ ಮುಗುಳ್ನಗೆ ಮಾಯವಾಗಿ ಮುಖ ಗಂಭೀರವಾಯಿತು. ಕೆಲಹೊತ್ತು ಕಳೆದ ಬಳಿಕ, 'ನೀನೂ ಈ ಜನರ ಮಾತುಗಳನ್ನು ನಂಬುತ್ತೀಯಾ ಹಮೀದ್? ಇದೆಲ್ಲ ಈ ಜನರ ಸಮಯ ಸಾಧಕತನ; ಇವರಿಗೆಲ್ಲ ನಿಜವಾಗಿಯೂ ಧರ್ಮದ ಬಗ್ಗೆಯಾಗಲಿ, ಸಮಾಜದ ಬಗ್ಗೆಯಾಗಲಿ ಏನಾದರೂ ಕಳಕಳಿ ಇದೆಯೆಂದುಕೊಂಡೆಯಾ?' ಎಂದು ಜುಗುಪ್ಸೆಯಿಂದ ನುಡಿದನು. ಬಳಿಕ ಎದ್ದು ಕುಳಿತು, 'ನಾನೊಂದು ಕತೆ ಹೇಳುತ್ತೇನೆ. ಅದನ್ನು ಕೇಳಿದ ಬಳಿಕ ನಿನ್ನ ಅಭಿಪ್ರಾಯ ತಿಳಿಸು' ಎಂದನು.

'ಅಯ್ಯೋ ಮಾರಾಯ ನಿನ್ನ ಕತೆ ಕೇಳುತ್ತಾ ಕುಳಿತುಕೊಳ್ಳಲು ಈಗ ನನಗೆ ವೇಳೆ ಇಲ್ಲ ಎನ್ನುತ್ತಿದ್ದಂತೆಯೇ' ಆತ ನಡುವೆಯೇ ತಡೆದು, 'ಕತೆಯೆಂದರೆ ಕಟ್ಟುಕತೆಯಲ್ಲ ಮಾರಾಯಾ ನಿಜವಾಗಿ ನಡೆದ ಕತೆ' ಎಂದನು. ನಡೆದ ಕತೆಯೆಂದಾಗ ನನ್ನ ಕಿವಿ ನಿಮಿರಿತು; ನಿದ್ರೆ ಹಾರಿತು. 'ಹೂ, ಹಾಗಾದರೆ ಹೇಳು' ಎನ್ನುತ್ತಾ ಕತೆ ಕೇಳಲು ಉತ್ಸುಕತೆ ಪ್ರಕಟಿಸಿದೆ. ಹುಸೇನ್ ಕತೆ ಹೇಳಲು ತೊಡಗಿದನು.

* * * *

ಆ ನಗರಕ್ಕೆ ಸಮೀಪವಾಗಿ ಕೇಂದ್ರ ಸರಕಾರದ ಸಂಶೋಧನಾ ಸಂಸ್ಥೆಯೊಂದಿದೆ. ಅಲ್ಲಿ ಸಹಾಯಕ ಕಾರ್ಯನಿರ್ವಾಹಕ ತಂತ್ರಜ್ಞನಾಗಿ ಸೇವೆ ಸಲ್ಲಿಸುತ್ತಿದ್ದವನು ರಹೀಮ್.

ರಹೀಮ್ ಈ ಶತಮಾನದಲ್ಲಿ ಬದುಕಲು ನಾಲಾಯಕ್ಕಾದ ವ್ಯಕ್ತಿ ಎಂಬುದು ಆತನ ಸ್ನೇಹಿತರ ಅನ್ನಿಸಿಕೆ. ಆತನ ಅತಿ ಪ್ರಾಮಾಣಿಕತೆಯೇ ಸ್ನೇಹಿತರ ಈ ವಾದಕ್ಕೆ ಕಾರಣ. ಸಾಕಷ್ಟು ಮೇಲ್ಸಂಪಾದನೆ, ಪಡೆಯಬಹುದಾಗಿದ್ದ ಉದ್ಯೋಗದಲ್ಲಿದ್ದರೂ ಈವರೆಗೂ ಆ ಹಾದಿ ತುಳಿದವನಲ್ಲ. ತಿಂಗಳ ಕೊನೆಯಲ್ಲಿ ಹಣದ ಕೊರತೆಯಿಂದಾಗಿ ಬಸಳೆಸೊಪ್ಪಿನ ಸಾರು ಮಾಡಿ ಊಟಮಾಡಿದ್ದು ಎಷ್ಟು ಬಾರಿಯೊ ! ಆತನ

ಮನೆಯಲ್ಲಿ ಹೆಂಡತಿ ಮತ್ತು ಈರ್ವರು ಮಕ್ಕಳು, ತಾಯಿ, ನಿರುದ್ಯೋಗಿ ತಮ್ಮ ಮತ್ತು ತಂಗಿ ಇದ್ದಾರೆ. ಮಗ ಮುಂದಿನ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತುಕೊಳ್ಳುವನು. ಮಗಳು ಏಳನೆಯ ತರಗತಿಯಲ್ಲಿದ್ದಾಳೆ. ಎಲ್ಲರೂ ಆತನೊಡನೆ ಸರಕಾರಿ ಮನೆಯಲ್ಲಿ ವಾಸಿಸುತ್ತಿದ್ದರು. ಆತನ ಅತಿ ಪ್ರಾಮಾಣಿಕತೆ ಮತ್ತು ದೈವಭಕ್ತಿ ಉಳಿದವರಿಗೆ ಕೊಂಚ ಹಾಸ್ಯಾಸ್ಪದವಾಗಿ ತೋರುತ್ತಿತ್ತು. ಬದುಕಲು ಕಲಿಯದವನು, ದೇಶೋದ್ಧಾರಕ ಎಂಬ ಅಡ್ಡ ಹೆಸರನ್ನು ಕಟ್ಟಿದ್ದರು.

ಹೀಗಿರುವಾಗ ಒಂದು ದಿನ ಸಂಸ್ಥೆಯ ನಿರ್ದೇಶಕ ಚಟರ್ಜಿ ಅವರು ರಹೀಮ್‌ನನ್ನು ತಮ್ಮ ಕಚೇರಿಗೆ ಕರೆಸಿದರು. ಅತ ಅಲ್ಲಿಗೆ ಹೋದಾಗ ಇನ್ನೊಂದಿಬ್ಬರು ಅಲ್ಲಿ ಕುಳಿತಿದ್ದರು.

'ನಮಸ್ಕಾರ ಸಾರ್' ಒಳಗೆ ಪ್ರವೇಶಿಸುತ್ತಾ ಆತನೆಂದನು.

'ಬನ್ನಿ ರಹೀಮ್ ಕುಳಿತುಕೊಳ್ಳಿ' ಎಂದು ಸೌಜನ್ಯದಿಂದಲೇ ಅವರೆಂದರು. ಬಳಿಕ 'ನಿಮಗೆ ಇವರ ಪರಿಚಯವಿರಬೇಕಲ್ಲಾ?' ಎಂದರು.

ರಹೀಮನಿಗೆ ಕೂಡಲೇ ಎಲ್ಲವೂ ಹೊಳೆಯಿತು. ಕಳೆದ ಬಾರಿ ಟೆಂಡರ್ ಕರೆದ ಕೆಲಸ ಈತನಿಗೆ ದಕ್ಕಿರಲಿಲ್ಲ. ಅದನ್ನು ಈಗ ಅಡ್ಡ ಹಾದಿಯಲ್ಲಿ ದಕ್ಕಿಸಿಕೊಳ್ಳಲು ಸಂಸ್ಥೆಯ ನಿರ್ದೇಶಕರನ್ನೇ ಹಿಡಿದಿದ್ದಾನೆ. ನಿರ್ದೇಶಕರು ನೇರವಾಗಿ ಮುಖ್ಯ ವಿಷಯಕ್ಕೆ ಬಂದರು.

'ನೋಡಿ ರಹೀಮ್, ಈತ ಈ ಭಾಗದ ಬಹು ಪ್ರಖ್ಯಾತ ಕಂಟ್ರಾಕ್ಟರ್. ಈ ಕೆಲಸದ ಕಂಟ್ರಾಕ್ಟ್ ಈತನಿಗೆ ದೊರೆಯುವಂತೆ ಮಾಡಲು ನಿಮ್ಮಿಂದ ಸಾಧ್ಯ' ಎನ್ನುತ್ತಾ ಅವರು ರಹೀಮನ ಮುಖ ನೋಡಿದರು.

ರಹೀಮ್ ಕೋಪೋದ್ರಿಕ್ತನಾದನು. ಆತನ ಕಣ್ಣುಗಳು ಕೆಂಪಾದವು. ಉಸಿರಾಟ ತೀವ್ರವಾಯಿತು. ಆತನು ಎದ್ದು ನಿಂತನು.

'ಸರ್, ಹಣಕ್ಕಾಗಿ ಈ ಅನ್ಯಾಯದ ಕೆಲಸ ಮಾಡಬೇಕೆನ್ನುತ್ತೀರಾ? ಇಂತಹ ಕೆಲಸಗಳನ್ನೆಲ್ಲಾ ಮಾಡಲು ನೀವು ಬೇರೆಯವರನ್ನು ಹುಡುಕಿಕೊಳ್ಳಿ. ನನ್ನಿಂದ ಸಾಧ್ಯವಿಲ್ಲ', ಎನ್ನುತ್ತಾ ಕೋಪಗೊಂಡು ಕೋಣೆಯಿಂದ ಹೊರಟೇ ಹೋದನು.

ಬುದ್ಧಿ ಹತೋಟಿಗೆ ಬಂದಾಗ ಆತನು ಯೋಚಿಸತೊಡಗಿದನು. ಕೋಪದಿಂದ ಎದುರುತ್ತರ ನೀಡಿದ್ದು ತನ್ನ ಮೇಲಧಿಕಾರಿಗೆ, ಆತ ಇಚ್ಚಿಸಿದರೆ ತನಗೆ ಎಂತಹ ಶಿಕ್ಷೆ ಬೇಕಾದರೂ ನೀಡಬಲ್ಲರು. ಮೇಲಧಿಕಾರಿಗಳ ಮರ್ಜಿಯನ್ನು ಅನುಸರಿಸದೆ ತೊಂದರೆಗೀಡಾದವರು ಎಷ್ಟೋ ಮಂದಿ ಇದ್ದಾರೆ. ತಾನು ಅವರ ಮಾತನ್ನು ಅನುಸರಿಸದಿದ್ದುದು ಮಾತ್ರವಲ್ಲ, ಅವರೊಡನೆ ಎದುರುವಾದಿಸಿ ಅವಮಾನಿಸಿದ್ದೇನೆ ಕೂಡ. ಇನ್ನು ಇಂದೋ ನಾಳೆಯೋ ತನ್ನನ್ನೆತ್ತಿ ದೇಶದ ಯಾವುದೋ ಮೂಲೆಗೆ ಎಸೆಯಲೂ ಆತ ಹಿಂದೆ ಮುಂದೆ ನೋಡಲಾರರೇನೋ?.

ಇದಾಗಿ ಕೆಲವು ದಿನಗಳೇ ಕಳೆದರೂ ಆತನಂದುಕೊಂಡಂತಹ ಅನರ್ಥವೇನೂ ಜರುಗಲಿಲ್ಲ. ನಿರ್ದೇಶಕರು ಆತನನ್ನು ಯಾವುದೋ ಮೂಲೆಗೆತ್ತಿ ಎಸೆಯಲೂ ಇಲ್ಲ; ಆತನಿಗೆ ಇನ್ನಾವ ರೀತಿಯ ಕಿರುಕುಳವನ್ನು ಕೊಡಲೂ ಇಲ್ಲ. ಅವರು ಆ ಪ್ರಕರಣವನ್ನು ಅಲ್ಲಿಗೇ ಮರೆತರು. ಪ್ರಾಮಾಣಿಕ ಅಧಿಕಾರಿಯೊಬ್ಬನಿಗೆ ಕಿರುಕುಳ ಕೊಡಲು ಅವರ ಮನಸ್ಸಾಕ್ಷಿಗೆ ಒಪ್ಪಿಗೆಯಾಗಲಿಲ್ಲವೇನೊ!.

ಒಂದೆರಡು ವರ್ಷಗಳೇ ಕಳೆದವು. ಆ ಸಂಸ್ಥೆಯ ನಿರ್ದೇಶಕರು ಬದಲಾಗಿದ್ದರು. ಹೊಸಬರು ಬಂದಾಗ ರಹೀಮ್ ನೆಮ್ಮದಿಯ ನಿಟ್ಟುಸಿರೆಳೆದಿದ್ದನು. ಆತನ ಮನ ಹಗುರಾಯಿತು. ಏಕೆಂದರೆ ಈತನು ರಹೀಮ್‌ನಿಗೆ ಬೇಕಾದವನಾಗಿದ್ದನು. ಈವರೆಗೂ ಆತನ ಹೃದಯದಲ್ಲಿ ಮನೆ ಮಾಡಿಕೊಂಡಿದ್ದ ಅಸ್ಥಿರತೆ ಮರೆಯಾಯಿತು.

ಒಂದು ದಿನ ಹೊಸ ನಿರ್ದೇಶಕರು ರಹೀಮ್‌ನನ್ನು ಕಚೇರಿಗೆ ಕರೆಸಿ ಆತನಿಗೆ ಒಂದು ಕೆಲಸವಹಿಸಿದ್ದರು. 'ಕೇಂದ್ರ ಸರಕಾರದ ಕೆಲವು ಅಧಿಕಾರಿಗಳು ಮತ್ತು ವಿಜ್ಞಾನಿಗಳು ಒಂದೆರಡು ದಿನಗಳ ಮಟ್ಟಿಗೆ ಇಲ್ಲಿ ತಂಗಲಿದ್ದಾರೆ. ಅವರು ಬಂದು ಹೋಗುವವರೆಗೆ ಅವರನ್ನು ಚೆನ್ನಾಗಿ ನೋಡಿಕೊಳ್ಳುವ ಜವಾಬ್ದಾರಿ ನಿಮ್ಮದು' ಎಂದು ಅಧಿಕಾರವಾಣಿಯಿಂದಲೇ ನುಡಿದರು.

ರಹೀಮ್‌ನಿಗೆ ಪೇಚಿಗಿಟ್ಟುಕೊಂಡಿತು. ಅವರನ್ನು ಚೆನ್ನಾಗಿ ನೋಡಿಕೊಳ್ಳುವುದೆಂದರೆ ಅವರ ಊಟ ತಿಂಡಿಯ ಖರ್ಚೆಲ್ಲಾ ತಾನೇ ವಹಿಸಿಕೊಳ್ಳಬೇಕು. ತನ್ನ ಬಳಿಯಲ್ಲಂತೂ ಇಂತಹ ಖರ್ಚಿಗೆ ಹಣವಿಲ್ಲ. ಅದಕ್ಕಾಗಿ ಕಂಟ್ರಾಕ್ಟರನೆಡೆಗೆ ಕೈಚಾಚಬೇಕು. ಅವನ ಮುಲಾಜಿಗೆ ಒಮ್ಮೆ ಬಿದ್ದ ಮೇಲೆ ತಾನು ಅವನ ಕೈಗೊಂಬೆಯಾಗಬೇಕಾಗುತ್ತದೆ. ಇದೊಂದೂ ತನ್ನಿಂದಾಗದು. ಹೀಗೆ ಕೆಲಹೊತ್ತು ಯೋಚಿಸಿದ ಬಳಿಕ ಆತನು ತನ್ನ ಸಹಾಯಕನನ್ನು ಕರೆದನು

'ನೋಡಿ ನಿರ್ದೇಶಕರು ನನಗೆ ಇಂತಹದೊಂದು ಕೆಲಸ ಒಪ್ಪಿಸಿದ್ದಾರೆ. ಆದರೆ ನಾನೀಗ ಅರ್ಜೆಂಟಾಗಿ ಊರಿಗೆ ಹೋಗಬೇಕಾಗಿದೆ. ಒಂದು ವಾರ ನಾನು ರಜೆಯಲ್ಲಿರುತ್ತೇನೆ. ಆದ್ದರಿಂದ ಈ ಸಮಿತಿಯನ್ನು ನೋಡಿಕೊಳ್ಳುವ ಜವಾಬ್ದಾರಿ ನಿಮ್ಮದು' ಎಂದು ಹೇಳಿದನು.

ಆತನು ರಜೆ ಮುಗಿಸಿ ಹಿಂತಿರುಗಿದಾಗ ತನ್ನ ಸಹಾಯಕನನ್ನು ಕರೆದು ಕೇಳಿದನು. 'ಏನ್ರಿ ಎಲ್ಲಾ ಚೆನ್ನಾಗಾಯಿತೇ?'. 'ಹೌದು ಸಾರ್, ಆ ಕಂಟ್ರಾಕ್ಟರ್‌ಗೆ ಹೇಳಿ ಅವರಿಗೆ ಬೇಕಾದ ಏರ್ಪಾಡುಗಳನ್ನೆಲ್ಲ ಮಾಡಿಸಿದೆ!, ಉತ್ಸಾಹದಿಂದ ನುಡಿದನಾತ.

ಆದರೆ ಪ್ರಕರಣ ಅಲ್ಲಿಗೆ ಕೊನೆಗೊಳ್ಳಲಿಲ್ಲ. ಸಂಸ್ಥೆಯ ನಿರ್ದೇಶಕರು ರಹೀಮನಿಗೆ ಕರೆಕಳುಹಿಸಿದರು. ಕೊಂಚ ಅಳುಕಿನಿಂದಲೇ ಅವನು ಅವರ ಕೋಣೆಯನ್ನು ಪ್ರವೇಶಿಸಿದನು.

ಅವರ ಮುಖ ಗಂಭೀರವಾಗಿತ್ತು. ಒಳ ಬಂದಾತನನ್ನು ಕುಳಿತುಕೊಳ್ಳಿ ಎಂದು ಸೌಜನ್ಯಕ್ಕಾದರೂ ನುಡಿಯಲಿಲ್ಲ. ನೇರವಾಗಿ ವಿಷಯಯವನ್ನೆತ್ತಿಕೊಂಡರು. 'ನಿಮಗೆ ನಾನೊಂದು ಜವಾಬ್ದಾರಿಯ ಕೆಲಸ ಒಪ್ಪಿಸಿದ್ದೆ. ನೀವದನ್ನು ಸರಿಯಾಗಿ ನಿರ್ವಹಿಸಿದ್ದೀರಾ?'.

'ನಾನು ಅಗತ್ಯವಾಗಿ ಊರಿಗೆ ಹೋಗಬೇಕಾಗಿತ್ತು ಸಾರ್, ಆದ್ದರಿಂದ ನನ್ನ ಸಹಾಯಕನಿಗೆ ಆ ಕೆಲಸ ವಹಿಸಿದ್ದೆ. ಎಲ್ಲವೂ ಸುಗಮವಾಗಿ ನಡೆಯಿತೆಂದು' ಆತ ಹೇಳಿದ ಸಾರ್. ಧ್ವನಿಯನ್ನು ಆದಷ್ಟು ಮೃದುವಾಗಿಸಿಕೊಂಡು ನುಡಿದನು ರಹೀಮ್.

ನಿರ್ದೇಶಕರು ಆತನ ಮುಖವನ್ನೇ ದುರುದುರು ನೋಡಿದರು. 'ನನ್ನ ಕೈಕೆಳಗೆ ಕೆಲಸ ಮಾಡುವವರು, ನನ್ನ ಅಪ್ಪಣೆಯನ್ನು ಪಾಲಿಸಲೇ ಬೇಕು. ನಿಮ್ಮಿಷ್ಟ ಬಂದಂತೆ ವರ್ತಿಸಲು ಇದೇನು ನಿಮ್ಮ ಮನೆಯೆಂದು ತಿಳಿದಿರಾ?', ಎಂದು ಜೋರಾಗಿ ಕೇಳಿದರು.

ರಹೀಮನ ಸಹನೆಯ ಕಟ್ಟೆಯೊಡೆಯಿತು. ಆತನಲ್ಲಡಗಿದ್ದ ಮುಂಗೋಪ ನೆತ್ತಿಗೇರಿತು.

'ನನ್ನ ಮನೆಯಾಗಿದ್ದರೆ ಬಿಟ್ಟಿ ಕೂಳು ತಿನ್ನಲು ಬಂದವರನ್ನು ಹೊಡೆದು ಹೊರಗೆ ಹಾಕುತ್ತಿದ್ದೆ!' ತಾನು ಯಾರೊಡನೆ ವಾದಿಸುತ್ತಿರುವೆನೆಂಬ ಅರಿವಿಲ್ಲದವನಂತೆ ಅವನ ಬಾಯಿಂದ ಈ ಮಾತುಗಳು ಹೊರಬಿದ್ದವು.

ತನ್ನ ಕೈಕೆಳಗಿನವನೊಬ್ಬನಿಂದ ಅವರು ಇಂತಹ ಮಾತುಗಳನ್ನು ನಿರೀಕ್ಷಿಸಿರಲಿಲ್ಲವೇನೋ, ಕ್ಷಣಕಾಲ ಅವಾಕ್ಕಾಗಿ ಕುಳಿತು ಬಳಿಕ, ಅವರು, 'ನಿಮ್ಮಂತಹ ಎಷ್ಟೋ ಜನರೊಡನೆ ಗುದ್ದಾಡಿ ಪಳಗಿದವನು ನಾನು. ನಿನಗೆ ಹೇಗೆ ಬುದ್ಧಿ ಕಲಿಸಬೇಕೆಂದು ನನಗೆ ಚೆನ್ನಾಗಿ ಗೊತ್ತು', ಎಂದು ಹಲ್ಲುಕಡಿಯುತ್ತಾ ನುಡಿದರು.

‘ನಾನು ನನ್ನ ಕರ್ತವ್ಯದಲ್ಲಿ ಹಿಂದೆ ಬಿದ್ದಿದ್ದರೆ, ನಾನು ಕಟ್ಟಿಸಿದ ಕಟ್ಟಡಗಳಲ್ಲಿ ಬಿರುಕು ಮುಂತಾದ ಒಂದೇ ಒಂದು ಕೊರತೆ ಕಂಡುಬಂದಿದ್ದರೆ ತಾವು ನನ್ನನ್ನು ಶಿಕ್ಷಿಸುವುದರಲ್ಲಿ ಅರ್ಥವಿದೆ. ನನ್ನ ಕಾರ್ಯಕ್ಷೇತ್ರಕ್ಕೆ ಸಂಬಂಧಪಡದ ಯಾರೋ ಬಂದಾಗ ನಾನು ಅವರಿಗೆ ಮರ್ಯಾದೆ ನೀಡಲಿಲ್ಲವೆಂದು ತಾವು ನನ್ನನ್ನು ಶಿಕ್ಷಿಸುವುದಾದರೆ ನಾನೇನೂ ಹೇಳಲಾರೆ. ತಮ್ಮ ಮನಸ್ಸಾಕ್ಷಿಗೆ ಸರಿಕಂಡಂತೆ ಮಾಡಿ’ ಎನ್ನುತ್ತಾ ಅವನು ಅವರ ಉತ್ತರಕ್ಕೂ ಕಾಯದೆ ಅಲ್ಲಿಂದ ಹೊರಟು ಹೋದನು.

ಕೆಲವೇ ದಿನಗಳಲ್ಲಿ ಈ ಘರ್ಷಣೆಯ ಪ್ರತಿಕ್ರಿಯೆ ಕಾಣಿಸಿಕೊಂಡಿತು. ರಹೀಮನಿಗೆ ಪಟ್ಟಣದಿಂದ ಸುಮಾರು ನಾನೂರು ಮೈಲು ದೂರದ ಊರಿಗೆ ವರ್ಗವಾದ ಆಜ್ಞೆ ಬಂತು.

ಈ ಹೊಸ ಸ್ಥಳ ಸಮೀಪದ ಪಟ್ಟಣದಿಂದ ಹದಿನೈದು ಕಿಲೋಮೀಟರ್ ದೂರದಲ್ಲಿತ್ತು. ಅಲ್ಲದೆ ಅಲ್ಲಿ ಸರಕಾರಿ ಮನೆ ಇರಲಿಲ್ಲ. ಸಮೀಪದ ಪಟ್ಟಣದಲ್ಲಿ ಸಾವಿರಗಟ್ಟಲೆ ಅಡ್ವಾನ್ಸ್ ತೆತ್ತು ದುಬಾರಿ ಬಾಡಿಗೆಕೊಟ್ಟು ಮನೆ ಮಾಡಬೇಕಾಗಿತ್ತು. ಹೀಗಾಗಿ ಸಂಸಾರ ಸಾಗಿಸುವ ಯೋಚನೆಯನ್ನೇ ಆತ ಕೈ ಬಿಡಬೇಕಾಯಿತು.

‘ಮೊದಲಿನ ನಿರ್ದೇಶಕರೊಡನೆಯೂ ಇದೇ ರೀತಿಯ ಘರ್ಷಣೆ ನಡೆದಿತ್ತು. ಆದರೆ ಅವರು ನನಗೆ ಯಾವುದೇ ರೀತಿಯ ಕಿರುಕುಳವನ್ನೂ ಕೊಡದೆ ನನ್ನೊಡನೆ ಏನೂ ಆಗಿಲ್ಲದಂತೆ ಸಹಜವಾಗಿಯೇ ವರ್ತಿಸುತ್ತಿದ್ದರು. ಆದರೆ ಬೇಕಾದವರೆನಿಸಿಕೊಂಡ ಈತನಿಂದ ನನಗೆಷ್ಟು ಕಷ್ಟನಷ್ಟವಾಯಿತೆಂದು ನಾನು ಯಾರೊಡನೆ ಹೇಳಲಿ? ಅಧಿಕಾರದ ಅಮಲು ತಲೆಗೇರಿದ ಮನುಷ್ಯ ಎಷ್ಟು ಕ್ರೂರಿಯಾಗಬಲ್ಲ ಎಂಬುದಕ್ಕೆ ಇದೊಂದು ನಿದರ್ಶನ’ ಎಂದುಕೊಂಡ ರಹೀಮ್.

* * * *

‘ಈಗ ನೀನೇ ಹೇಳು ಹಮೀದ್, ತೊಂದರೆ ಮಾಡುವವರು ಯಾರು? ಯಾರಿಂದ ತಮಗೆ ತೊಂದರೆಯಾಗುತ್ತಿದೆ? ಅನ್ಯರಿಂದಲೇ ಅಥವಾ ನಮ್ಮವರೆನಿಸಿಕೊಂಡವರಿಂದಲೇ?’ ಎಂದು ಕೇಳಿದ ಹುಸೇನ್.

ಕತೆ ಕೇಳಿದ ಬಳಿಕ ನಾನು ದಿಙ್ಮೂಢನಾಗಿ ಕುಳಿತೆ. ಹಣ, ಅಧಿಕಾರದ ಪ್ರವಾಹದ ಸುಳಿಯಲ್ಲಿ ಮಾನವೀಯತೆಯೆಂಬುದು ಮುಳುಗಿ ಹೋಗುತ್ತದೆಯಲ್ಲವೇ?.



## ಕರ್ತೃ – ಭಾವ – ಆಕರ



**ಸಾರಾ ಅಬೂಬಕ್ಕರ್ ೩೦ ಜೂನ್ ೧೯೩೬** ರಂದು **ಕಾಸರಗೋಡಿನಲ್ಲಿ** ಜನಿಸಿದರು. ಮಹಿಳೆಯರು ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಳ್ಳುವುದು ಅಪರೂಪ ಎನ್ನುವ ಸಂದರ್ಭದಲ್ಲಿ ಬರೆವಣಿಗೆ ಆರಂಭಿಸಿದ ಇವರು ಇಂದು ನಾಡಿನ ಖ್ಯಾತ ಕತೆಗಾರ್ತಿ ಹಾಗೂ ಕಾದಂಬರಿಗಾರ್ತಿಯಾಗಿ ಜನಪ್ರಿಯತೆ ಗಳಿಸಿರುವರು. **ಚಂದ್ರಗಿರಿಯ ತೀರದಲ್ಲಿ, ಸಹನಾ, ಕದನವಿರಾಮ, ವಜ್ರಗಳು, ಸುಳಿಯಲ್ಲಿ ಸಿಕ್ಕವರು, ತಳ ಒಡೆದ ದೋಣಿಯಲಿ** ಮೊದಲಾದುವು ಪ್ರಮುಖ **ಕಾದಂಬರಿಗಳು. ಚಪ್ಪಲಿಗಳು, ಖೆಡ್ಡಾ, ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು, ಪಯಣ** ಇವು ಕಥಾ **ಸಂಕಲನಗಳು**. ಇವರ ಸಾಹಿತ್ಯ ಕೃಷಿಗಾಗಿ ಅನೇಕ ಪ್ರಶಸ್ತಿಗಳು ಹಾಗೂ ಕರ್ನಾಟಕ ಸಾಹಿತ್ಯ ಪರಿಷತ್ತಿನ ಪ್ರತಿಷ್ಠಿತ **ನೃಪತುಂಗಪ್ರಶಸ್ತಿಯೂ** ಲಭಿಸಿದ್ದು, ಕನ್ನಡ ಸಂಸ್ಕೃತಿಯ ಚಿಂತಕರಲ್ಲಿ ಇವರು ಒಬ್ಬರು.

* * * *

ಸಾಮಾಜಿಕ ಮೌಲ್ಯಗಳಲ್ಲಿ ಒಂದಾದ ಪ್ರಾಮಾಣಿಕತೆ ಇಂದು ಎಲ್ಲೆಡೆ ಕಡಿಮೆಯಾಗಿ ಸ್ವಾರ್ಥಸಾಧನೆ ಹೆಚ್ಚುತ್ತಿದೆ. ಇಲ್ಲಿ ನಿಸ್ಪೃಹ ಅಧಿಕಾರಿಯೊಬ್ಬನ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸಲು ಉದ್ದೇಶಿತ ತೊಂದರೆ ಉಂಟಾಗುತ್ತದೆ. ಹಾಗೆ ತೊಂದರೆ ಮಾಡುವ ಮೇಲಧಿಕಾರಿಯೂ ಅವನಿಗೆ ಬೇಕಾದವನೇ ಆಗಿರುತ್ತಾನೆ. ಯಾವುದೇ ವರ್ಗದ ಶೋಷಣೆ ನಡೆಯುವುದು ಆಯಾ ವರ್ಗದವರಿಂದಲೇ ಎಂಬುದನ್ನು ಪ್ರಸ್ತುತ ಕತೆ ಪ್ರತಿಪಾದಿಸುವುದು.

*  *  *  *

ಪ್ರಕೃತ **ಪ್ರಾಮಾಣಿಕತೆ** ಕತೆಯನ್ನು **ಸಾರಾ ಅಬೂಬಕ್ಕರ್** ಅವರ **ಚಪ್ಪಲಿಗಳು** ಕಥಾಸಂಕಲನದಿಂದ (ಪುಟ ೧೧೫-೧೨೨) ಆಯ್ದು ಸಂಪಾದಿಸಿ ನಿಗದಿಪಡಿಸಿದೆ.

## ಪದ -ಗದ್ಯಾರ್ಥ

ಬೃಹತ್-ದೊಡ್ಡ; ಹರಟೆ-ಕಾಲಹರಣದ ಮಾತು; ತರಾತುರಿ-ಆತುರ; ಅಸ್ಥಿರತೆ-ಸ್ಥಿರವಲ್ಲದ ಸ್ಥಿತಿ; ಬಾಧೆ-ನೋವು; ಸಮಯಸಾಧಕತನ-ಅವಕಾಶವಾದ; ಕಳಕಳಿ-ಕಾಳಜಿ, ಆಸಕ್ತಿ; ಜುಗುಪ್ಸೆ-ಬೇಸರ, ಅಸಹ್ಯ; ನಾಲಾಯಕ್ಕು-ಲಾಯಕ್ಕಿಲ್ಲದ;ಅರ್ಹತೆಯಿಲ್ಲದ; ಸೌಜನ್ಯ-ಸಜ್ಜನಿಕೆ, ಒಳ್ಳೆಯತನ; ಹತೋಟಿ-ನಿಯಂತ್ರಣ; ಮರ್ಜಿ-ಕಾಳಜಿ; ಅನರ್ಥ-ಅಪಾಯ, ಕೇಡು; ಕಿರುಕುಳ-ತೊಂದರೆ; ವಾಣಿ-ಮಾತು; ಪ್ರಕರಣ-ಘಟನೆ; ಪಳಗಿದವನು-ಅನುಭವಿ, ಹಳಬ; ಘರ್ಷಣೆ-ತಿಕ್ಕಾಟ, ಜಗಳ ; ದಿಙ್ಮೂಢ-ದಿಕ್ಕುತೋಚದ, ಮಂಕಾಗು

## ಪಠ್ಯಾಧಾರ ಟಿಪ್ಪಣಿ

**ಟೆಂಡರ್**-ತಾಂತ್ರಿಕ ಹಾಗೂ ಸಾಮಾನ್ಯ ವಸ್ತುಗಳ ಸರಬರಾಜು ಮಾಡಲು, ಕಟ್ಟಡ, ರಸ್ತೆ, ಅಣೆಕಟ್ಟು ಇತ್ಯಾದಿ ಕಾಮಗಾರಿ ಕೆಲಸವನ್ನು ಮಾಡಲು ನಿಗದಿತ ದರ ವಿವರವನ್ನು ತಿಳಿಸಿ, ಒಪ್ಪಿಗೆ ನೀಡುವ ಪಟ್ಟಿ.

**ಸಂಶೋಧನಾ ಸಂಸ್ಥೆ** - ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ವಾಣಿಜ್ಯ, ಕಲೆ, ಭಾಷೆ, ವಿಜ್ಞಾನ, ತಂತ್ರಜ್ಞಾನ ಇತ್ಯಾದಿ ವಿಷಯಗಳ ತಲಸ್ಪರ್ಶಿ ಅಧ್ಯಯನದ ಅನುಕೂಲತೆಯ ಸುಸಜ್ಜಿತ ತಾಣ.



## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**

**ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದ ಉತ್ತರವನ್ನು ಆರಿಸಿ ಬರೆಯಿರಿ.**

೧. ಇದೆಲ್ಲ ಈ ಜನರ ________________ ಸಾಧಕತನ.
[ಕಾರ್ಯ  ಲಾಭ  ಸ್ವಾರ್ಥ  ಸಮಯ]

೨. ರಹೀಮನ ಅತಿ ________________ ಸ್ನೇಹಿತರ ವಾದಕ್ಕೆ ಕಾರಣ
[ಬಡತನವೇ  ಕೃಪಣತೆಯೇ  ಪ್ರಾಮಾಣಿಕತೆಯೇ  ಕೋಪವೇ]

೩. ಪ್ರಾಮಾಣಿಕ ಅಧಿಕಾರಿಯೊಬ್ಬನಿಗೆ ಕಿರುಕುಳ ಕೊಡಲು ಅವರ ____________ ಒಪ್ಪಿಗೆಯಾಗಲಿಲ್ಲವೇನೋ
[ಆತ್ಮಸಾಕ್ಷಿಗೆ  ಮನಸ್ಸಾಕ್ಷಿ  ಅಂತರಂಗಕ್ಕೆ  ಸ್ವಭಾವಕ್ಕೆ]

೪. ಅವನ ಮುಲಾಜಿಗೆ ಒಮ್ಮೆ ಬಿದ್ದ ಮೇಲೆ ತಾನು ಅವನ ____________ ಆಗಬೇಕು.

[ಸೂತ್ರಧಾರ ಹಂಗು ಗುಲಾಮ ಕೈಗೊಂಬೆ]

೫. 'ಪ್ರಾಮಾಣಿಕತೆ' ಪಾಠವನ್ನು __________ ಕೃತಿಯಿಂದ ಆರಿಸಲಾಗಿದೆ.

[ಖೆಡ್ಡಾ ಚಪ್ಪಲಿಗಳು ಪಯಣ ವಜ್ರಗಳು]

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ ಪ್ರಶ್ನೆಗಳು**

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ನಗರದಲ್ಲಿ ಅಕಸ್ಮಾತ್ತಾಗಿ ಸಿಕ್ಕ ಗೆಳೆಯ ಹುಸೇನ್ ಏನು ಹೇಳಿದ?

೨. ಮೈದಾನದಲ್ಲಿ ನಡೆಯುತ್ತಿದ್ದ ಸಭೆ ಯಾವುದು?

೩. ರಹೀಮ ಕಾರ್ಯ ನಿರ್ವಹಿಸುತ್ತಿದ್ದ ಸಂಸ್ಥೆ ಯಾವುದು?

೪. ಹಾಸ್ಯಾಸ್ಪದವಾಗಿ ತೋರುತ್ತಿದ್ದ ರಹೀಮನ ಗುಣ ಯಾವುದು?

೫. ಚಟರ್ಜಿ ಅವರು ರಹೀಮನಿಗೆ ಏನೆಂದು ಹೇಳಿದರು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು/ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ**

೧. ಸಭೆಯಲ್ಲಿ ಯಾವ ವಿಷಯವನ್ನು ವಿವರಿಸುತ್ತಿದ್ದರು?

೨. ಹುಸೇನ ಜುಗುಪ್ಸೆಯಿಂದ ನುಡಿದ ಮಾತುಗಳೇನು?

೩. ರಹೀಮ್ ಚಟರ್ಜಿ ಅವರಿಗೆ ಕೋಪದಲ್ಲಿ ಏನೆಂದು ಉತ್ತರಿಸಿದನು?

೪. ರಹೀಮ ತನ್ನ ಜವಾಬ್ದಾರಿಯಿಂದ ತಪ್ಪಿಸಿಕೊಂಡ ಬಗೆ ಹೇಗೆ?

೫. ರಹೀಮನಿಗೆ ವರ್ಗವಾದ ಹೊಸ ಸ್ಥಳ ಹೇಗಿತ್ತು?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ರಹೀಮನ ಸ್ವಭಾವ ಹಾಗೂ ಪ್ರಾಮಾಣಿಕತೆಯನ್ನು ವಿವರಿಸಿ.

೨. ರಹೀಮ ತನಗೆ ಬೇಕಾದವರೇ ಆದ ನಿರ್ದೇಶಕರನ್ನು ಎದುರು ಹಾಕಿಕೊಂಡುದರ ಪರಿಣಾಮವನ್ನು ವಿವರಿಸಿ.

**ಈ. ಕೊಟ್ಟಿರುವ ವಾಕ್ಯಗಳ ಸಂದರ್ಭಸಹಿತ ಸ್ವಾರಸ್ಯವನ್ನು ಬರೆಯಿರಿ**

೧. "ನೀನೂ ಈ ಜನರ ಮಾತುಗಳನ್ನು ನಂಬುತ್ತೀಯಾ?"

೨. "ಅವರನ್ನು ಚೆನ್ನಾಗಿ ನೋಡಿಕೊಳ್ಳುವ ಜವಾಬ್ದಾರಿ ನಿಮ್ಮದು"

೩. "ಬಿಟ್ಟಿ ಕೂಳು ತಿನ್ನಲು ಬಂದವರನ್ನು ಹೊಡೆದು ಹೊರಗೆ ಹಾಕುತ್ತಿದ್ದೆ"

೪. "ನಿಮ್ಮಂತಹ ಎಷ್ಟೋ ಜನರೊಡನೆ ಗುದ್ದಾಡಿ ಪಳಗಿದವನು ನಾನು"

## ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**

**ಕ್ರಿಯಾಪದ – ಪರಿಚಯಾತ್ಮಕ ಸ್ಥೂಲ ವಿವರ**

**– ತಾಯಿಯು ಅಡುಗೆಯನ್ನು ಮಾಡುತ್ತಾಳೆ**

**– ತಂದೆಯು ಕೆಲಸವನ್ನು ಮಾಡಿದರು**

**– ಅವನು ಊಟವನ್ನು ಮಾಡುವನು**

**– ದೇವರು ಒಳ್ಳೆಯದನ್ನು ಮಾಡಲಿ**

ಈ ವಾಕ್ಯಗಳಲ್ಲಿ ಅಡಿಗೆರೆ ಎಳೆದಿರುವ ಪದಗಳು ಕ್ರಿಯೆ ಪೂರ್ಣಗೊಂಡಿರುವುದನ್ನು ಸೂಚಿಸುತ್ತವೆ. ಹೀಗೆ ಕ್ರಿಯೆ ಪೂರ್ಣಗೊಂಡಿದೆ ಎಂಬ ಅರ್ಥವನ್ನು ಸೂಚಿಸಬಲ್ಲ ಪದವೇ **ಕ್ರಿಯಾಪದ.**

ಈ ವಾಕ್ಯಗಳಲ್ಲಿರುವ ಎಲ್ಲ ಕ್ರಿಯಾಪದಗಳಿಗೂ ಮೂಲಪದ **ಮಾಡು** ಎಂಬುದು. ಇಂತಹ ಮೂಲರೂಪ ಪದಗಳೇ **ಕ್ರಿಯಾಪ್ರಕೃತಿ** ಅಥವಾ **ಧಾತು.**

**ಸೂತ್ರ :ಕ್ರಿಯಾರ್ಥವನ್ನು ಸೂಚಿಸುವ ಪ್ರತ್ಯಯವನ್ನು ಹೊಂದದಿರುವ ಪದವೇ ಕ್ರಿಯಾಪ್ರಕೃತಿ ಅಥವಾ ಧಾತು. ಅಂದರೆ ಕ್ರಿಯಾಪದದ ಮೂಲ ರೂಪವೇ ಧಾತು.**

**ಸಕರ್ಮಕ ಮತ್ತು ಅಕರ್ಮಕ ಧಾತುಗಳು :**

ಈ ವಾಕ್ಯಗಳನ್ನು ಗಮನಿಸಿ:

**– ರಾಮನು ಗಿಡವನ್ನು ನೆಟ್ಟನು**

**– ಶಿಲ್ಪಿಗಳು ಗುಡಿಯನ್ನು ಕಟ್ಟಿದರು**

**– ವಿದ್ಯಾರ್ಥಿಗಳು ಪಾಠವನ್ನು ಓದಿದರು**

ಮೂರು ವಾಕ್ಯಗಳಲ್ಲಿರುವ **ನೆಟ್ಟನು ಕಟ್ಟಿದರು ಓದಿದರು** ಎಂಬ ಕ್ರಿಯಾಪದಗಳಿಗೆ **ಏನನ್ನು** ಎಂಬ ಪ್ರಶ್ನೆ ಹಾಕಿದಾಗ ಅನುಕ್ರಮವಾಗಿ **ಗಿಡವನ್ನು ಗುಡಿಯನ್ನು ಪಾಠವನ್ನು** ಎಂಬ ಉತ್ತರ ದೊರೆಯುವುದು ಇಂತಹ ಪದಗಳೇ **ಕರ್ಮ**ಪದಗಳು.

ಇಲ್ಲಿರುವ ಮೂರು ಕ್ರಿಯಾಪದಗಳಲ್ಲಿ ಅನುಕ್ರಮವಾಗಿ **ನೆಡು ಕಟ್ಟು ಓದು** ಎಂಬ ಧಾತುಗಳಿವೆ. ಎಲ್ಲಾ ಧಾತುಗಳಿಗೂ **ಕರ್ಮಪದ** ಬೇಕಾಗುತ್ತದೆ. ಇಲ್ಲವಾದಲ್ಲಿ ವಾಕ್ಯ ಪೂರ್ಣ ಅರ್ಥವನ್ನು ಕೊಡಲಾರದು.

**ಸೂತ್ರ: ಕರ್ಮಪದವನ್ನು ಬಯಸುವ ಧಾತುಗಳೇ ಸಕರ್ಮಕ ಧಾತುಗಳು**

ಈ ವಾಕ್ಯಗಳನ್ನು ಗಮನಿಸಿ:

**– ಕೂಸು ಮಲಗಿತು**

**– ಅವನು ಬದುಕಿದನು**

**– ಆಕಾಶ ಹೊಳೆಯುತ್ತಿದೆ**

ಇಲ್ಲಿ **ಮಲಗಿತು** **ಬದುಕಿದನು** **ಹೊಳೆಯುತ್ತಿದೆ** ಎಂಬ ಪದಗಳು ಕ್ರಿಯಾಪದಗಳು. ಈ ಕ್ರಿಯಾಪದಗಳಿಗೆ **ಏನನ್ನು** ಎಂದು ಪ್ರಶ್ನೆ ಹಾಕಲು ಸಾಧ್ಯವಿಲ್ಲ. ಹಾಗಾಗಿ ಈ ಕ್ರಿಯಾಪದಗಳಲ್ಲಿರುವ **ಮಲಗು** **ಬದುಕು** **ಹೊಳೆಯು** ಎಂಬ ಧಾತುಗಳು ಕರ್ಮಪದವನ್ನು ಬಯಸುವುದಿಲ್ಲ.

**ಸೂತ್ರ : ಕರ್ಮಪದವನ್ನು ಬಯಸದೇ ಇರುವ ಧಾತುಗಳೇ ಅಕರ್ಮಕ ಧಾತುಗಳು.**

## ಭಾಷಾಚಟುವಟಿಕೆ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

೧. ಕ್ರಿಯಾಪದ ಎಂದರೇನು?

೨. ಕ್ರಿಯಾಪ್ರಕೃತಿ ಎಂದರೇನು? ಉದಾಹರಣೆ ಕೊಡಿ.

೩. ಸಕರ್ಮಕ ಧಾತುವನ್ನು ಉದಾಹರಣೆ ಸಹಿತ ವಿವರಿಸಿ.

೪. ಅಕರ್ಮಕ ಧಾತುಗಳಿಗೆ ಐದು ನಿದರ್ಶನ ಕೊಡಿ.

**ಆ. ಕೊಟ್ಟಿರುವ ವಾಕ್ಯಗಳಲ್ಲಿ ಸಕರ್ಮಕ ಮತ್ತು ಅಕರ್ಮಕ ಧಾತುಗಳನ್ನು ಗುರುತಿಸಿ ಬರೆಯಿರಿ**

೧. ವಿದ್ಯಾರ್ಥಿನಿಯರು ಆಟವನ್ನು ಆಡಿದರು

೨. ಗಾಳಿಯು ಬೀಸುತ್ತಿದೆ.

೩. ಹಕ್ಕಿಗಳು ಚಿಲಿಪಿಲಿಗುಟ್ಟಿದವು.

೪. ರೈತನು ಹೊಲವನ್ನು ಉಳುತ್ತಾನೆ.



- **ಪಠ್ಯಾಧಾರಿತ ಪ್ರಾಯೋಗಿಕ ಭಾಷಾಭ್ಯಾಸ**

**ಅ. ಕೊಟ್ಟಿರುವ ಪದಗಳ ವಿರುದ್ಧಾರ್ಥಕ ಪದ ಬರೆಯಿರಿ**

ದೀರ್ಘ ವಿಫಲ ಪಥ್ಯ ಕಮ್ಮಿ ಉತ್ಸಾಹ

**ಆ. ಕೊಟ್ಟಿರುವ ಪದಗಳ ತದ್ಭವ ರೂಪವನ್ನು ಬರೆಯಿರಿ**

ಆಶ್ಚರ್ಯ ನಿತ್ಯ ಸಂತೋಷ ರಕ್ತ

## ಪೂರಕ ಓದು

➢ **ಸಾರಾ ಅಬೂಬಕ್ಕರ್** ಅವರ **ಪಯಣ ಮತ್ತು ಗಗನ ಸಖಿ** ಸಣ್ಣಕತೆಗಳ ಸಂಕಲನವನ್ನು ಓದಿ.

➢ **ಮಾಸ್ತಿ ವೆಂಕಟೇಶ ಅಯ್ಯಂಗಾರ್** ಅವರ **ಮೊಸರಿನ ಮಂಗಮ್ಮ** ಕಥಾ ಸಂಕಲನವನ್ನು ಓದಿ.

## ಗದ್ಯಪಾಠ – ೦೩

# ಬೆಡಗಿನತಾಣ ಜಯಪುರ

[ಪ್ರವಾಸ ಸಾಹಿತ್ಯ]

– ಕೋಟ ಶಿವರಾಮಕಾರಂತ

### ಮುನ್ನಯಾರಿ

'ದೇಶ ಸುತ್ತಿನೋಡು ಕೋಶ ಓದಿನೋಡು' ಎಂಬ ಗಾದೆಯಂತೆ ಜ್ಞಾನ ಸಂಗ್ರಹಕ್ಕೆ ಎರಡು ಮಾರ್ಗಗಳು. ದೇಶ ಸುತ್ತುವುದರಿಂದ ವ್ಯಕ್ತಿಗೆ ಪ್ರಾಯೋಗಿಕವಾಗಿ ಜ್ಞಾನ ದೊರೆಯುತ್ತದೆ. ಆ ಅನುಭವದ ಬರೆಹ ರೂಪದ ಅಭಿವ್ಯಕ್ತಿಯೇ ಪ್ರವಾಸ ಕಥನ. ಇದು ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ಸೂರಿ ವೆಂಕಟರಮಣಶಾಸ್ತ್ರೀ ಕರ್ಕಿ ಅವರ ದಕ್ಷಿಣ ಯಾತ್ರಾ ಚರಿತ್ರೆ ಕೃತಿಯೇ ಮೊದಲ ಪ್ರವಾಸಕಥನವೆಂದು ತಿಳಿದು ಬಂದಿದೆ. ಇದು ಓದುಗನಿಗೆ ಪ್ರವಾಸದ ಪರೋಕ್ಷ ಅನುಭವವನ್ನು ನೀಡುವುದರಿಂದ ಪ್ರವಾಸ ಕಥನಕ್ಕೆ ಹೆಚ್ಚಿನ ಪ್ರಾಮುಖ್ಯತೆಯುಂಟು. ಪ್ರವಾಸಕಥನಗಳನ್ನು ನಾಡಿನ ಪ್ರವಾಸಕಥನಗಳು, ದೇಶೀ ಪ್ರವಾಸಕಥನಗಳು, ಅಂತಾರಾಷ್ಟ್ರೀಯ ಪ್ರವಾಸಕಥನಗಳೆಂದು ಸ್ಥೂಲವಾಗಿ ವಿಂಗಡಿಸಿದೆ. ಪ್ರಕೃತ ಪ್ರವಾಸ ಕಥನ ದೇಶೀ ನೆಲೆಯದ್ದು.

### ಅರ್ಥೈಸಿ – ಓದಿ

| | | | | |
|---|---|---|---|---|
| ದೇಶೀಯ | ಹೋಳಿಹುಣ್ಣಿಮೆ | ಮುಂಡಾಸು | ಗುಡಿಗೋಪುರ | ಅಂತಃಪುರ |
| ಚಾವಡಿ | ಚಂದ್ರಕಾಂತಶಿಲೆ | ಲತಾಪುಷ್ಪ | ಮುಚ್ಚಿಗೆ | ಲಕ್ಷೋಪಲಕ್ಷ |
| ನಕ್ಷತ್ರಾಕೃತಿ | ಗರ್ಭಗೃಹ | ನವರಂಗ | ಲೆಮನೇಡ್ | ಜಂತ್ರಮಂತ್ರ |

### ನಿಗದಿತ ಮೂಲ ಪ್ರವಾಸ ಕಥನ – ಗದ್ಯ

ಜಯಪುರ ನನ್ನ ಪಾಲಿಗೆ ಹೊಸತಾಗಿರಲಿಲ್ಲ. ಹದಿನೈದು ವರ್ಷಗಳ ಹಿಂದೊಮ್ಮೆ ಹೋಗಿದ್ದೆ. ಈ ಬಾರಿ ನಾನೂ ಶ್ರೀಪತಿಯೂ ರೈಲಿನಿಂದ ಇಳಿದಾಗ, ಬೆಳಗಿನ ಹನ್ನೊಂದು ಗಂಟೆಯ ಬಿಸಿಲು ಬಡಿಯುತ್ತಿತ್ತು. ಮಿತ್ರರಾದ ರೈಗಳು ನಿಲ್ದಾಣಕ್ಕೆ ಬಂದು ನಮಗಾಗಿ ಕಾದಿದ್ದರು. ನಮ್ಮನ್ನು ಊರ ಹೊರಗಿನ ಅವರ ಮನೆಗೆ ಕರೆದುಕೊಂಡು ಹೋದರು. ಹೊರಗಡೆ ನಾಲ್ಕು ಸುತ್ತಲೂ ಉಸುಬು ಹರಡಿದ್ದ ಮರುಭೂಮಿಯಲ್ಲಿ ಅವರ ಮನೆಯಿತ್ತು. ಅಲ್ಲಿ ಮಧ್ಯಾಹ್ನ ವೇಳೆ ಸ್ನಾನಕ್ಕೆ ನೀರು ಕಾಯಿಸುವ ಅಗತ್ಯವಿಲ್ಲ, ಉಸುಬಿನ ಕಾವಿನಿಂದ ನಲ್ಲಿಯ ನೀರು ಕಾದೇ ಬರುತ್ತಿತ್ತು. ನಾನೇನೋ ಬಿಸಿನೀರು ಸ್ನಾನ ಮಾಡುವವ. ಆದರೆ ನನಗೆ ಆದದ್ದು ಶ್ರೀಪತಿಗೆ ಆಗದು. ಶ್ರೀಪತಿ ತಣ್ಣೀರು ಮೀಯುತ್ತಿದ್ದ. ಹೀಗಾಗಿ ಕಾದಿದ್ದ ನೀರನ್ನು ಆರಿಸಿ, ತಣ್ಣೀರಿನ ಸ್ನಾನ ಮಾಡಿದ. ಅನಂತರ ಊಟ ಮಾಡಿ ಒಂದೆರಡು ತಾಸು ವಿಶ್ರಾಂತಿ ಪಡೆದೆವು. ನಮ್ಮ ಮೊದಲ ಕಾರ್ಯಕ್ರಮವೆಂದರೆ, ಅಂಬೇರಕ್ಕೆ ಹೋಗುವುದು. ಊರ ಹೊರಗಿರುವ ನಮ್ಮ ಮಿತ್ರ ರೈಗಳಿಗೆ, ಅಂಬೇರಕ್ಕೂ ಜಯಪುರಕ್ಕೂ ನಡುವೆ ಸಿಟಿ ಬಸ್ ನಡೆಯುತ್ತಿತ್ತೆಂದು ಸಹ ಗೊತ್ತಿರಲಿಲ್ಲ. ಹೀಗಾಗಿ ನಾವು ಟಾಂಗಾವನ್ನು ಗೊತ್ತು ಮಾಡಿಕೊಂಡು, ನಗರದ ಮಧ್ಯಭಾಗದಿಂದ ಹಾದು ಹೋದೆವು.



ಜಯಪುರದ ಮುಖ್ಯಬೀದಿಗಳು ನನ್ನ ಮನಸ್ಸಿನ ಮೇಲೆ ತುಂಬಾ ಪರಿಣಾಮವನ್ನು ಬೀರಿದವು. ಒಂದು ಶತಮಾನದ ಹಿಂದೆ ಆ ನಗರದ ಬೀದಿಗಳು ನಿರ್ಮಾಣವಾಗಿದ್ದರೂ ಬಹಳ ಅಗಲವಾದ ಬೀದಿಗಳವು; ನೇರವಾದವುಗಳು. ಬಹುದೂರದಿಂದ ಕಾಣಿಸುವ ಅಂಗಡಿ-ಮನೆಗಳ ದೇಶೀ ವಾಸ್ತುರಚನೆ ಚೆನ್ನಾಗಿ ಶೋಭಿಸುತ್ತದೆ. ಇಲ್ಲಿನ ಒಂದೊಂದು ಮನೆಯೂ ಒಂದೊಂದು ಶೈಲಿಯದೂ ಒಂದೊಂದು ದೇಶದ್ದೂ ಆಗಿ ಕಾಣಿಸುವುದಿಲ್ಲ. ಆದುದರಿಂದಲೇ ನನಗೆ ಅವುಗಳ ಮೇಲೆ ಮೋಹ. ಇಲ್ಲಿನ ಮುಖ್ಯ ಬೀದಿಗಳು ಸಂಧಿಸುವಲ್ಲಿ ಸುಂದರವಾದ ಚೌಕಗಳಿವೆ. ಕೆಲವೊಂದು ಕಡೆಗಳಲ್ಲಿ ಭವ್ಯವಾದ ಮಹಾದ್ವಾರಗಳಿವೆ. ಅಲ್ಲದೆ ಜಯಪುರ ಬಣ್ಣಗಾರರ ತವರೂರು. ಬಣ್ಣ ಹಾಕುವ ಕುಶಲಿಗರು ಆ ಊರಿನಲ್ಲಿ ಬಹಳ ಮಂದಿ ಇದ್ದಾರೆ. ಬಣ್ಣದ ಮೋಹವಿರುವ ಜನರೂ ಬಹಳ ಇದ್ದಾರೆ. ಗಿಡಮರಗಳಿಲ್ಲದ ಸ್ಥಳದಲ್ಲಿ ವಾಸಿಸುವ ಜನರಿಗೆ, ಕಣ್ಣಿನ ತಣಿವು ಹೇಗೆ ಬರಬೇಕು? ಹಾಗೆಂದೋ ಏನೋ, ಇಲ್ಲಿನ ಜನರು ಅದರಲ್ಲೂ ಹೆಂಗಸರೂ ರಂಗುರಂಗಿನ ಲಂಗ, ಪಾಯಿಜಾಮಾ, ಸೀರೆ, ರವಿಕೆ, ಮೇಲುದೆ ತೊಡುವ ಅಭ್ಯಾಸದವರು. ಅದರಲ್ಲೂ ಕೆಂಪು, ಕಿತ್ತಳೆ, ಹಳದಿ ಎಂದರೆ ಪ್ರಾಣ. ನಿತ್ಯವೂ ಹೋಳಿ ಹುಣ್ಣಿಮೆ ಮಾಡುವವರಂತೆ ಬಣ್ಣದ ಚೆಲ್ಲಾಟ ಅವರ ಬಟ್ಟೆಗಳಲ್ಲಿ. ಗಂಡಸರೂ ರಂಗುರಾಯರೇ. ಅವರ ಪಂಚೆ, ಅಂಗಿಗಳಲ್ಲಿ ರಂಗು ಕಾಣಿಸದಿದ್ದರೂ ಮುಂಡಾಸಿನ ಮೂವತ್ತು ಮೊಳಗಳಲ್ಲಿ ಮುನ್ನೂರು ಬಣ್ಣಗಳನ್ನು ಮೆರೆಯಿಸುವುದುಂಟು. ಸುತ್ತುಸುತ್ತಿನ ಅವರ ದೇಶೀ ಮುಂಡಾಸನ್ನು ಚೆನ್ನಾಗಿ ಬಿಗಿದುಕೊಂಡಾಗ ಬಲು ಗಂಭೀರವಾಗಿಯೇ ಕಾಣಿಸುತ್ತದೆ.



ನಾವು ನಗರವನ್ನು ಕಳೆದು, ಸುಂದರವಾದ ರಸ್ತೆಗಳಲ್ಲಿ ಹಾದು, ಉನ್ನತ ಬೆಟ್ಟಗಳಿಗಭಿಮುಖವಾಗಿ ಹೊರಟೆವು. ಇನ್ನೊಂದು ನಾಲ್ಕು ಮೈಲಿಗೆ ಅಂಬೇರದ ಬೆಟ್ಟ ಸಿಗುತ್ತದೆ. ಅಂಬೇರ ಜಯಪುರದ ಪೂರ್ವಕಾಲದ ರಾಜಧಾನಿ. ಹಳೆಯ ಕೋಟೆ, ಅರಮನೆಗಳೆಲ್ಲ ಅಲ್ಲಿವೆ. ಸಂಜೆ, ಮುಂಜಾನೆಗಳಲ್ಲಿ ಅಲ್ಲಿಯ ಗುಡ್ಡ, ಬೆಟ್ಟ ಹಾಗೂ ಕಣಿವೆಗಳು ಅಪೂರ್ವ ಮೋಹಕತೆಯನ್ನು ತಾಳುತ್ತವೆ. ಹಿಂದೆ ನಾನು ಅಲ್ಲಿಗೆ ಹೋದಾಗ ಜನವಸತಿ ಇದ್ದಿರಲಿಲ್ಲ. ಹಲವಾರು ಪ್ರಾಚೀನ ಗುಡಿಗೋಪುರಗಳು ಗೂಬೆಯ ಮನೆಗಳಾಗಿದ್ದವು. ಈಗ ಹಾಗಿಲ್ಲ; ನೂರಾರು ಸಿಂಧೀ ಕುಟುಂಬಗಳು ಅಲ್ಲಿ ಮನೆ ಮಾಡಿಕೊಂಡಿವೆ. ಅಂಬೇರದ ಬುಡದಲ್ಲಿ ಒಂದು ಪುಟ್ಟ ಕೆರೆ. ಕೆರೆಯ ನೋಟ ಸುಂದರವಾದ ನೋಟ. ಸುತ್ತಲಿನ ಮರಗಳಲ್ಲಿ ಎಳೆ ಹಸುರು ತಳಿರುಗಳು ಚಿಗುರಿದ್ದು, ಮರಗಳು ಹಚ್ಚಗೆ ಕಾಣಿಸುತ್ತಿದ್ದುವು. ಕೆರೆಯ ಮಗ್ಗುಲಿನಿಂದ ಮುಂದುವರಿದರೆ, ಸುಂದರ ಉದ್ಯಾನವೊಂದು ಕಾಣಸಿಗುತ್ತದೆ. ಬಳಿಯಲ್ಲೇ ಕೆಂಪು ಕಲ್ಲಿನ ಹಳೆಯ ಕಾಲದ ಕೆಲವೊಂದು ಸುಂದರ

ಪ್ರತಿಮೆಗಳಿವೆ. ಪ್ರಾಚೀನ ರಜಪೂತ ಕೆತ್ತನೆಯ ಸರಳತೆ, ವೈಖರಿ, ಭವ್ಯತೆಗಳೆಲ್ಲ ಕಾಣಿಸುತ್ತವೆ. ಉದ್ಯಾನವನ್ನು ಹಾಯ್ದು ದಿಡ್ಡಿಯ ಬಾಗಿಲೊಂದನ್ನು ದಾಟಿ, ಕೋಟೆಯ ದಾರಿಯನ್ನು ಏರಿ ಹೋಗಬೇಕು. ಏರುತ್ತ ಹೋದಂತೆ, ಕೆಳಗಿನ ನೋಟ ರಮಣೀಯವಾಗುತ್ತಾ ಹೋಗುವುದು. ನಾವು ಅವಸರ ಅವಸರವಾಗಿ ಕೋಟೆಯನ್ನು ಸೇರಿದೆವು. ಕೋಟೆಯ ಒಳಗೆ ಅರಮನೆ. ಅರಮನೆಗೆ ಸಂಬಂಧಿಸಿದ ಸಭಾಂಗಣ ದೇವಾಲಯ ಮೊದಲಾದುವನ್ನು ಅಲ್ಲಿ ಎರಡು ಮೂರು ಅಂತಸ್ತುಗಳಲ್ಲಿ ರಚಿಸಿದ್ದಾರೆ.

ಅರಮನೆಯ ಮೊದಲ ಅಂತಸ್ತಿನಲ್ಲಿ ಪುಟ್ಟ ದೇವಾಲಯವಿದೆ. ಈ ಪುಟ್ಟ ಮಂದಿರ ಚಿತ್ರ ಕೆಲಸಗಳಿಂದ ಕೂಡಿದ ಹಾಲುಗಲ್ಲಿನ ರಚನೆಯಿಂದ ಕೂಡಿದೆ. ಗೋಡೆಗಳೆಲ್ಲವೂ ಹಾಲುಗಲ್ಲಿನವೇ ; ನೆಲವೂ ಅದರದ್ದೇ. ಸ್ತಂಭಗಳೂ ಅವುಗಳದ್ದೇ. ಗುಡಿ ಚಿಕ್ಕದಾಗಿದ್ದರೂ ಶಾಂತವಾಗಿ ಕಾಣಿಸುವ ಮಂದಿರ. ಗುಡಿಯ ವಿಗ್ರಹ ಮಾತ್ರ ಆಕಾರ ಹಾಗೂ ಅಲಂಕಾರಗಳಿಂದ ಅಷ್ಟೊಂದು ಶೋಭಿಸದು. ಇಲ್ಲಿಯ ಗುಡಿಯನ್ನು ನೋಡಿ, ಮೇಲಿನ ಅಂಗಳವನ್ನೇರಿ ಹೋದರೆ ದೊಡ್ಡದೊಂದು ಸಭಾಂಗಣ ಬರುತ್ತದೆ. ಇದು ವಿಶಾಲವಾದ ಹಾಲುಗಲ್ಲಿನ ರಚನೆ. ಅದರ ಚಾವಣಿ, ರಜಪುತಾನದ ಶೈಲಿಯ ಕಮಾನು ಮತ್ತು ಕಂಬಗಳು ತುಂಬ ಲಲಿತವಾಗಿದ್ದು, ಪರಸ್ಪರ ಹೊಂದಿಕೊಂಡು, ಈ ರಚನೆಗೆ ಚೆಲುವನ್ನು ನೀಡಿವೆ. ಎದುರಿನ ಅಂಗಣವೂ ಸಾಕಷ್ಟು ವಿಶಾಲವಾಗಿದೆ. ಇಲ್ಲಿಂದ ಮೂರನೆಯ ಅಂತಸ್ತಿಗೆ ಹೋದರೆ ರಾಜರ ಅಂತಃಪುರವನ್ನು ನೋಡಬಹುದು. ಇಲ್ಲಿನ ಕೆಲವು ಭಾಗಗಳಲ್ಲಿ ಚಂದ್ರಕಾಂತ ಶಿಲೆಯ ಸುಂದರ ಮಂಟಪಗಳಿವೆ. ಶಿಲೆಯನ್ನು ಕೆತ್ತಿ ಬಣ್ಣದ ಕಲ್ಲುಗಳಿಂದ ಕೊರೆದು ತುಂಬಿಸಿದ ಲತಾಪುಷ್ಪಗಳ ಚಿತ್ರಾವಳಿಗಳೂ ಇವೆ. ಇನ್ನೊಂದೆರಡು ಚಾವಡಿಗಳು ಕನ್ನಡಿಯ ಚೂರುಗಳನ್ನು ಸುಣ್ಣದ ಗಾರೆಯಲ್ಲಿ ಅಂಟಿಸಿ, ಚಿತ್ರವಿಚಿತ್ರ ಪ್ರತಿರೂಪಗಳನ್ನು ನಿರ್ಮಿಸಿ ಅಲಂಕರಿಸಿದಂತಹ ಕಂಬ, ಮುಚ್ಚಿಕೆಗಳುಳ್ಳ ರಚನೆ. ಕತ್ತಲಿನಲ್ಲಿ ದೀವಿಗೆ ಹೊತ್ತಿಸಿದಾಗ, ಲಕ್ಷೋಪಲಕ್ಷ ಈ ಗಾಜಿನ ತುಣುಕುಗಳು, ಚಾವಡಿಗೆ ನಕ್ಷತ್ರಲೋಕದ ಸೊಬಗನ್ನು ಕೊಡುತ್ತವೆ. ಅರಮನೆಯ ಮೊದಲನೆಯ ಮಟ್ಟದಲ್ಲಿ ಇನ್ನೊಂದು ಅಂತಃಪುರವಿದೆ. ಅಲ್ಲೂ ಹಾಲುಗಲ್ಲಿನ ಚಾವಡಿ ಮತ್ತು ನೀರಿನ ಕಾರಂಜಿಗಳಿವೆ; ಚಿತ್ರ ಕೊರೆದು ಮಾಡಿದ ಹಾಲುಗಲ್ಲಿನ ನೀರಕಾಲುವೆಗಳಿವೆ. ಇವೆಲ್ಲ ರಜಪೂತ ಅರಸರುಗಳ ರಸಿಕ ಜೀವನದ ದ್ಯೋತಕಗಳು.

ಆವರಣದ ಹಿಂದುಗಡೆ ಇರುವ ತಗ್ಗಿನ ಕಣಿವೆಯ ತಳದಲ್ಲೇ ಕಾಣಿಸುತ್ತದೆ ಮೀರಾಬಾಯಿಯ ದೇವಾಲಯ. ಆಕೆ ಗಿರಿಧರನಾಗರನನ್ನು ಪೂಜಿಸಿದ ಸ್ಥಳವಿದು. ಕೆಳಗಿಳಿದು ಹೋಗಿ ಗುಡಿಯನ್ನು ನೋಡಿದರೆ ಅದರ ಸೊಬಗು ಚೆನ್ನಾಗಿ ಕಾಣುತ್ತದೆ. ನಕ್ಷತ್ರಾಕೃತಿಯನ್ನು ತುಂಬಿಕೊಂಡ ಗರ್ಭಗೃಹ, ನವರಂಗಗಳಿವೆ. ಗುಡಿಯ ಸುಂದರ ಆವರಣವನ್ನು ನೋಡಿ ಹಿಗ್ಗಿ, ನಮ್ಮ ಟಾಂಗಾ ನಿಲ್ಲಿಸಿದಲ್ಲಿಗೆ ಮರಳಿ ಬಂದೆವು. ನಮ್ಮ ಜೀವ ತುಂಬ ದಣಿದಿತ್ತು. ನಮ್ಮೆಲ್ಲರಿಗೂ ಬಾಯಾರಿಕೆ ಏರಿ ಹೋಗಿತ್ತು. ನಾವು ಬಂದವರೇ, ಹಾದಿಯ ಮಗ್ಗುಲಿನ ಒಂದು ಅಂಗಡಿಯ ಮುಂದೆ ಕುಳಿತು, ಬಣ್ಣಬಣ್ಣದ ಸೋಡಾ, ಲೆಮನೇಡ್ ಕುಡಿದೆವು. ಉಡುಗೆಯಲ್ಲಿ ಅಷ್ಟೆಲ್ಲ ಬಣ್ಣಗಳನ್ನು ತುಂಬಿಸಿ ತಿರುಗುವ ಅಲ್ಲಿನ ಜನ, ಮಾರುವ ಸೋಡಾ, ಲೆಮನೇಡ್‌ಗಳಿಗೂ ಕಡುಪಿನ ರಂಗನ್ನು ಕೊಟ್ಟಿದ್ದಾರೆ. ಅವನ್ನು ಕಂಡರೆ ಇದು ಶಾಯಿಯೋ ಪಾನೀಯವೋ ಎಂಬ ಭ್ರಮೆ ಉಂಟಾಗುತ್ತದೆ. ನಮ್ಮ ಪಾಲಿಗೆ ದೊರೆತ, ಕುಡಿಯಬಹುದಾದ ಪಾನೀಯವೂ ಅದೊಂದೇ.

ಸರಿ, ಮನೆಗೆ ಹೊರಟೆವು. ಆಗ ಗೋಧೂಳಿಯ ಸಮಯ. ಟಾಂಗಾ ಕುದುರೆ ಮೆಲ್ಲಗೆ ನಮ್ಮ ಮಾನವೀ ಹೊರೆಯನ್ನು ಎಳೆದುಕೊಂಡು ಸಾಗುತ್ತಲಿತ್ತು. ಇಲ್ಲಿಂದ ಮುಂದೆ ತುಂಬ ಹೊಲಗಳು. ಹೊಲಗಳಲ್ಲಿ ಕೋಳಿ, ಕಾಗೆಗಳಿಗಿಂತ ಅಗ್ಗವಾಗಿ ಕಾಣಿಸುವ ನವಿಲಿನ ಹಿಂಡು. ನಿಜ, ನವಿಲುಗಳ ರಾಜ್ಯದಲ್ಲಿ ಬಣ್ಣದ ಕಣ್ಣು ಹುಟ್ಟಲು, ರಜಪುತಾನದ ಸ್ತ್ರೀಯರಿಗೆ ಬೇರೆ ಪ್ರೇರಣೆ ಬೇಕಿಲ್ಲ.





ಮರುದಿನ ಬೆಳಿಗ್ಗೆ ಅಲ್ಲಿಗೆ ಸಮೀಪವಾಗಿರುವ 'ಜಂತ್ರ ಮಂತ್ರ' ನೋಡಲು ಹೋದೆವು. 'ಜಂತ್ರ ಮಂತ್ರ' ಹಳೆಯ ಕಾಲದ ಖಗೋಳವಿಜ್ಞಾನದ ಪರಿಶೀಲನಾಲಯ. ೪೦೦–೫೦೦ ವರ್ಷಗಳ ಪೂರ್ವದಲ್ಲಿ, ಖಗೋಳಶಾಸ್ತ್ರಜ್ಞರು ಗ್ರಹ, ಸೂರ್ಯ ಚಂದ್ರ, ತಾರಾಮಂಡಲಗಳನ್ನು ಅಳೆದು, ಪರಿಶೀಲಿಸಿ ನೋಡುವ ಸಲುವಾಗಿ, ಇಲ್ಲಿ ವಿಚಿತ್ರವಾದ ಸಾಧನಗಳನ್ನು ನೆಟ್ಟಿದ್ದಾರೆ. ಇಂಥ ಹತ್ತೆಂಟು ವಿಧದ ಸಾಧನಗಳ ವಿಚಿತ್ರ ರಚನೆಗಳಿವೆ. ಗಳಿಗೆ ಅಳೆಯವುದಕ್ಕೆ, ಪ್ರತಿಯೊಂದು ತಿಂಗಳಿನಲ್ಲೂ ಸೂರ್ಯ, ನಕ್ಷತ್ರಗಳ ಗತಿ ಪರಿಶೀಲಿಸುವುದಕ್ಕೆ ಏನೇನೋ ಏರ್ಪಾಟುಗಳಿವೆ. ಪ್ರತಿಯೊಂದು ಸಾಧನದ ಮೇಲೂ ಅವುಗಳ ಉಪಯೋಗ ಮತ್ತು ಕಾಲವನ್ನು ಅಳೆಯುವ ರೀತಿ ಮೊದಲಾದುವನ್ನು ನಮೂದಿಸಿದೆ. ದೂರದರ್ಶಿಯ ಸಹಾಯವಿಲ್ಲದೆ, ಬರಿಗಣ್ಣಿನಿಂದಲೇ ಖಗೋಳದ ಗ್ರಹಗಳ ಗತಿಯನ್ನು ಅಳೆಯಲು ಮಾಡಿದ ಈ ಸಾಧನಗಳು, ಗಣಿತಕ್ಕೂ ಸೂಕ್ಷ್ಮ ಪರಿಶೀಲನೆಗೂ ಹಿರಿಯರು ಸಲ್ಲಿಸಿದ ಕಾಣಿಕೆ. ಸೂರ್ಯ ನಡುಬಾನಿನಲ್ಲಿ ನಿಂತು ನಮ್ಮ ತಲೆಯನ್ನು ಕೊರೆಯುತ್ತಿದ್ದನಾದುದರಿಂದ, ಇತರ ಸ್ಥಳಗಳನ್ನು ನೋಡುವ ಆಸೆ ಮರೆತು, ಮನೆಗೆ ಓಡಿ ಬಂದೆವು.

ಜಯಪುರದಲ್ಲಿ ಜಾನಪದ ನೃತ್ಯಗಳನ್ನು ನೋಡಬೇಕೆಂಬ ಹಂಬಲ ನನ್ನದಾಗಿತ್ತು. ಹಾಗಾಗಿ, ಮುಂಚಿತವಾಗಿಯೇ ಮಿತ್ರರಿಗೆ ನನ್ನ ಅಪೇಕ್ಷೆ ತಿಳಿಸಿದ್ದೆ. ಅವರು ಗೆಳೆಯರಿಗೆ ತಿಳಿಸಿ ಏರ್ಪಾಟು ಮಾಡಿದ್ದರು. ಸಂಜೆಯಾಗುತ್ತಲೇ ಅಲ್ಲಿನ ಚೀಫ್ ಇಂಜಿನಿಯರ್ ಗೋಪೀನಾಥರಾಯರ ಮನೆಗೆ ಹೋದೆವು. ಅವರು ಮೈಸೂರಿನವರು. ಸದ್ಯ ಜಯಪುರದಲ್ಲೇ ಉದ್ಯೋಗ ಮಾಡಿಕೊಂಡು ಸ್ವಂತ ಮನೆಯಲ್ಲಿ ವಾಸವಾಗಿದ್ದಾರೆ. ಅವರ ಸುಂದರ ಬಂಗಲೆ ಎದುರಿಗೆ ಹಚ್ಚಹಸುರಿನ ಬಯಲಿನ ಒಂದು ತುಣುಕು ಜಾಗವಿದೆ. ಅಲ್ಲೇ ನೃತ್ಯ ಕಾರ್ಯಕ್ರಮ. ಊರಿನ ಜನಸಾಮಾನ್ಯರ ನೃತ್ಯವದು. ಇಬ್ಬರು ಯೌವನಸ್ಥರು ಸ್ತ್ರೀಯರ ಉಡುಗೆ ಉಟ್ಟಿದ್ದರು.

ಮಾರವಾಡಿ ಸ್ತ್ರೀಯರಂತೆ ತಲೆಗೆ ಸೆರಗು ಹಾಕಿಕೊಂಡು, ಮುಖತೋರಿಸದೆ ಕುಣಿಯತೊಡಗಿದರು. ಹಿಮ್ಮೇಳಕ್ಕೆ ಡೋಲು ತಮಟೆಗಳಿದ್ದವು. ಮುಂಭಾಗದಲ್ಲಿ ಸ್ತ್ರೀವೇಷದ ನರ್ತಕರು ಲಾಸ್ಯವೆಸಗಿದರು. ಅವರ ಕಾಲಿನ ನಡಿಗೆಯಲ್ಲೂ ಕೈಗಳ ಚಲನೆಯಲ್ಲೂ ಜಾಣ್ಮೆ ಚೆಲುವುಗಳೆರಡೂ ಇದ್ದವು. ಅವರ ಜತೆಗೆ ಮೂರು, ನಾಲ್ಕು ಹುಡುಗರು ನಿತ್ಯದ ಉಡುಗೆಯಲ್ಲಿ ಕುಣಿದಾಡಿದರು. ಆ ನೋಟವನ್ನು ನೋಡುವುದಕ್ಕೆ ಪುರವಣಿಗರೂ ಬಂದು ಕಲೆತರು. ನಮಗಾಗಿ ಒಂದೇ ದಿನದ ಏರ್ಪಾಟಿನಿಂದ ಈ ಕಾರ್ಯಕ್ರಮವನ್ನು ಏರ್ಪಡಿಸಿದ ಮಿತ್ರರಿಗೆ ನಾನು ತುಂಬಾ ಕೃತಜ್ಞನಾಗಿರುವೆ. ಕೆಲಸವಾದ ಮೇಲೆ, ಗೋಪೀನಾಥರ ಆತಿಥ್ಯ ಸ್ವೀಕರಿಸಿ ಮನೆಗೆ ಮರಳಿದೆವು.

ಮುಂದೆಲ್ಲ ಅವಸರವೇ, ಅವಸರದ ಊಟ; ಅವಸರದ ಓಟ. ನಾವು ಧಾವಿಸಿ ಬರುವುದರೊಳಗಾಗಿ, ದಿಲ್ಲಿಗೆ ಹೋಗುವ ರೈಲುಬಂಡಿ ಬಂದಿತ್ತು. ಮಿತ್ರ ರೈಗಳ ಸತ್ಕಾರಕ್ಕೆ ವಂದನೆ ಸಲ್ಲಿಸಿ, ಬಂಡಿಯನ್ನೇರಿ, ಮೇಲಂತಸ್ತಿನಲ್ಲಿ ಹಾಸಿಗೆ ಬಿಡಿಸಿದೆವು. ನಮಗೆ ಬೆಳಗಾದದ್ದೇ ದೆಹಲಿಯನ್ನು ಸಮೀಪಿಸಿದಾಗ.

## ಕರ್ತೃ – ಭಾವ – ಆಕರ



ಶಿವರಾಮ ಕಾರಂತರು (ಕ್ರಿಸ್ತ ಶಕ ೧೯೦೨) ಉಡುಪಿ ಜಿಲ್ಲೆಯ **ಕೋಟದವರು**. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃತಿಗಳನ್ನು ರಚಿಸಿರುವ ಇವರ **ಚೋಮನದುಡಿ, ಮರಳಿಮಣ್ಣಿಗೆ, ಬೆಟ್ಟದಜೀವ, ಅಳಿದಮೇಲೆ ಕಾದಂಬರಿಗಳು ಪ್ರಸಿದ್ಧವಾಗಿವೆ. ಹಸಿವು, ಹಾವು, ಕವಿ, ಕರ್ಮ – ಕಥಾಸಂಕಲನಗಳನ್ನು, ರಾಷ್ಟ್ರಗೀತ ಸುಧಾಕರ ಮತ್ತು ನೀಳ್ಗವನಗಳು – ಕವನ ಸಂಕಲನಗಳನ್ನು** ರಚಿಸಿದ್ದಾರೆ. **ನಾಟಕ, ಹರಟೆ, ಬಾಲಸಾಹಿತ್ಯ, ವಿಜ್ಞಾನ ಸಾಹಿತ್ಯ, ಅನುವಾದ, ನಿಘಂಟು ರಚನೆಯನ್ನು ಮಾಡಿರುವ ಇವರು ಅಬೂವಿಂದ ಬರಾಮಕ್ಕೆ, ಅಪೂರ್ವ ಪಶ್ಚಿಮ, ಅರಸಿಕರಲ್ಲ, ಪಾತಾಳಕ್ಕೆ ಪಯಣ – ಪ್ರವಾಸ ಕಥನಗಳು. ಹುಚ್ಚು ಮನಸ್ಸಿನ ಹತ್ತು ಮುಖಗಳು ಆತ್ಮಕಥನ, ಯಕ್ಷಗಾನ ಬಯಲಾಟ – ಜಾನಪದ ಸಾಹಿತ್ಯ ಮುಂತಾದ ಕೃತಿಗಳನ್ನು** ರಚಿಸಿದ್ದಾರೆ.



ಇವರ **ಮೂಕಜ್ಜಿಯ ಕನಸುಗಳು** ಕಾದಂಬರಿಗೆ ಭಾರತೀಯ **ಜ್ಞಾನಪೀಠ** ಪ್ರಶಸ್ತಿ, **ಯಕ್ಷಗಾನ ಬಯಲಾಟ** ಕೃತಿಗೆ **ಕೇಂದ್ರ ಸಾಹಿತ್ಯ ಅಕಾಡೆಮಿ** ಪ್ರಶಸ್ತಿ, **ಮೈಮನಗಳ ಸುಳಿಯಲ್ಲಿ** ಕೃತಿಗೆ **ಪಂಪ** ಪ್ರಶಸ್ತಿ ಲಭಿಸಿದೆ. ಇವರು **೧೯೩೫**ರಲ್ಲಿ ಮೈಸೂರಿನಲ್ಲಿ ನಡೆದ ೩೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

* * * *

ಬೆಡಗಿನತಾಣ ಜಯಪುರ ಪಠ್ಯಭಾಗದಲ್ಲಿ ಭಾರತದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ನಗರಗಳಲ್ಲಿ ಒಂದಾದ ಜಯಪುರದ ಅಂದಚಂದ, ಅಲ್ಲಿನ ಜನರ ಉಡುಗೆ–ತೊಡುಗೆ, ಐತಿಹಾಸಿಕ ವೈಭವ, ಜಾನಪದ ಕಲೆಗಳ ಸೊಗಸು ಮೊದಲಾದ ವಿಚಾರಗಳ ಬಗ್ಗೆ ಲೇಖಕರು ತಿಳಿಸಿದ್ದಾರೆ. ಹಾಗೆಯೇ ಜಯಪುರದ ರಾಜರ ವೈಜ್ಞಾನಿಕತೆಗೆ ಸಾಕ್ಷಿಯಾದ ಜಂತ್ರ–ಮಂತ್ರ ಬಯಲು ಪ್ರಯೋಗಾಲಯದ ಬಗ್ಗೆ ವಿಶೇಷ ಉಲ್ಲೇಖವಿದೆ.

* * * *

ಪ್ರಕೃತ ಪ್ರವಾಸ ಕಥನ **ಬೆಡಗಿನತಾಣ ಜಯಪುರ** ಪಠ್ಯಭಾಗವನ್ನು **ಕನ್ನಡ ಮತ್ತು ಸಂಸ್ಕೃತಿ** ಇಲಾಖೆ ಹೊರತಂದಿರುವ **ಶಿವರಾಮಕಾರಂತರ ಸಾಹಿತ್ಯ ಶ್ರೇಣಿಯ ಸಂಪುಟ – ೩೨, ಭಾಗ – ೨, ಗ್ರಂಥದ ಅಬುವಿನಿಂದ ಬರಾಮಕ್ಕೆ** ಭಾಗದಿಂದ ಆರಿಸಿ, ಸಂಪಾದಿಸಿ ನಿಗದಿಪಡಿಸಲಾಗಿದೆ.

## ಪದ-ಗದ್ಯಾರ್ಥ

ಉಸುಬು-ಮರಳು, ಉಸುಕು; ದೇಶೀಯ-ದೇಶದೊಳಗಿನ; ವಾಸ್ತು-ಕಟ್ಟಡ ನಿರ್ಮಾಣ ಶಾಸ್ತ್ರ; ಮೇಲುದೆ-ಹೆಂಗಸರು ಮೈಮೇಲೆ ಹೊದೆಯುವ ವಸ್ತ್ರ; ಮುಂಡಾಸು-ಪೇಟ, ತಲೆಯುಡಿಗೆ: ನವರಂಗ-ದೇವಾಲಯದ ಸಭಾಮಂಟಪ: ಕಡುಪಿನಬಣ್ಣ, ದಟ್ಟವಾದಬಣ್ಣ, ರಂಗಾದಬಣ್ಣ: ಹಾಲುಗಲ್ಲು-ಅಮೃತಶಿಲೆ

## ಪಠ್ಯಾಧಾರ ಟಿಪ್ಪಣಿ

**ಗೋಧೂಳಿ ಸಮಯ :** ಮುಸ್ಸಂಜೆಯ ಸಮಯ, ಗ್ರಾಮೀಣಪ್ರದೇಶಗಳಲ್ಲಿ ದನಕರುಗಳು ಮನೆಗೆ ಹಿಂದಿರುಗಿ ಬರುವಾಗ ಅವುಗಳ ಗೊರಸಿನ ಘರ್ಷಣೆಯಿಂದಾಗಿ ನೆಲದಿಂದ ಧೂಳು ಏಳುತ್ತದೆ. ಈ ಸಮಯವನ್ನು ಗೋಧೂಳಿ ಸಮಯ ಎನ್ನುವರು. ಪುಣ್ಯ ಕಾರ್ಯಗಳಿಗೆ ಅತ್ಯಂತ ಪ್ರಶಸ್ತವಾದ ಸಮಯ.

**ದಿಡ್ಡಿ :** ಸಣ್ಣ ಬಾಗಿಲು (ಹೆಬ್ಬಾಗಿಲು ಅಥವಾ ಮುಖ್ಯದ್ವಾರದ ಬಾಗಿಲು ಮುಚ್ಚಿದ್ದಾಗ ತೆರೆದಿರುವ ಕಿರು ಬಾಗಿಲು).

**ಮುಚ್ಚಿಕೆ ರಚನೆ :** ಕಟ್ಟಡ ರಚನಾ ವಿನ್ಯಾಸದ ಬಗೆ. ಪದರು ಪದರು ರೂಪದ ಹೊದಿಕೆಯ ಕಟ್ಟಡ ರಚನೆ.

**ರಜಪುತಾನ ಶೈಲಿ :** ಇದು ರಜಪೂತರ ರಾಜಸ್ತಾನ ಪ್ರಾಂತೀಯ ರಾಜವಂಶೀಯ ಶಿಲ್ಪ ಕಲಾ ಶೈಲಿಯ ಬಗೆ. ವಿಶಾಲ ಅಂಕಣದಲ್ಲಿ ಲಲಿತವಾದ ಕಮಾನು ಮತ್ತು ಕಂಬಗಳ ಪರಸ್ಪರ ಹೊಂದಿಕೆಯ ರಚನಾ ವಿನ್ಯಾಸ ನಮೂನೆ.



## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**

**ಅ. ಬಿಟ್ಟ ಜಾಗವನ್ನು ಸೂಕ್ತ ಪದದಿಂದ ತುಂಬಿ**

೧. ಜಯಪುರ ಬಣ್ಣಗಾರರ ________________

೨. ಚಿತ್ರಕೊರೆದು ಮಾಡಿದ ________________ ನೀರ ಕಾಲುವೆಗಳು.

೩. ________________ ಹಳೆಯ ಕಾಲದ ಖಗೋಳವಿಜ್ಞಾನ ವೀಕ್ಷಣಾಲಯ.

೪. ಹಿಮ್ಮೇಳಕ್ಕೆ ______________ ತಮಟೆಗಳಿದ್ದವು.

೫. ಮಿತ್ರ ರೈಗಳ ______________ ವಂದನೆ ಸಲ್ಲಿಸಿದೆವು.

ಆ. ಹೊಂದಿಸಿ ಬರೆಯಿರಿ

| 'ಅ' ಪಟ್ಟಿ | 'ಆ' ಪಟ್ಟಿ |
|---|---|
| ೧. ಅಂಬೇರ | ಸವರ್ಣದೀರ್ಘಸಂಧಿ |
| ೨. ಲಕ್ಷೋಪಲಕ್ಷ | ತತ್ಸಮ |
| ೩. ಬಣ್ಣಬಣ್ಣ | ಪೂರ್ವದ ರಾಜಧಾನಿ |
| ೪. ಜಂತ್ರ ಮಂತ್ರ | ದ್ವಿರುಕ್ತಿ |
| ೫. ಶೃಂಗಾರ | ಖಗೋಳ ವೀಕ್ಷಣಾಲಯ |
| | ಮಂತ್ರವಾದಿ |
| | ಗುಣಸಂಧಿ |

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ ಪ್ರಶ್ನೆಗಳು**

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು/ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಜಯಪುರದ ಬೀದಿ ಹಾಗೂ ಮನೆಗಳ ಸೌಂದರ್ಯವನ್ನು ವರ್ಣಿಸಿ.

೨. ಲೇಖಕರ ಮೊದಲ ಅಂಬೇರ ಭೇಟಿಗೂ ಇತ್ತೀಚಿನ ಭೇಟಿಗೂ ಯಾವ ವ್ಯತ್ಯಾಸವಿತ್ತು?

೩. ಮೀರಾಬಾಯಿ ದೇವಾಲಯದ ಸೌಂದರ್ಯವನ್ನು ವಿವರಿಸಿ.

೪. ಲೇಖಕರು ನೋಡಿದ ಜನಪದ ನೃತ್ಯದ ಸೊಬಗನ್ನು ಚಿತ್ರಿಸಿ.

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಐದು/ಆರು ವಾಕ್ಯಗಳಲ್ಲಿ ಉತ್ತರಿಸಿ**

೧. ಜಯಪುರದ ಜನರಿಗೆ ಬಣ್ಣಗಳ ಬಗೆಗೆ ಇರುವ ಮೋಹವನ್ನು ತಿಳಿಸಿ.

೨. ಅಂಬೇರ ಬೆಟ್ಟದ ಮೂರು ಅಂತಸ್ತಿನ ಅರಮನೆಯ ಒಳಾಂಗಣ ಚೆಲುವನ್ನು ತಿಳಿಸಿ.

೩. ಜಂತ್ರ ಮಂತ್ರದ ವಿಶೇಷತೆಯನ್ನು ಪರಿಚಯ ಮಾಡಿಕೊಡಿ.

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ರೈಗಳ ಮನೆ ಎಂಥ ಪ್ರದೇಶದಲ್ಲಿತ್ತು?

೨. ಲೇಖಕರಿಗೆ ಜಯಪುರದ ಮನೆಗಳ ಮೇಲೆ ಮೋಹವೇಕೆ?

೩. ಜಯಪುರದ ಜನರಿಗೆ ಯಾವ ಯಾವ ಬಣ್ಣಗಳು ಇಷ್ಟ?

೪. ಜಯಪುರದ ಪೂರ್ವದ ರಾಜಧಾನಿ ಯಾವುದು?

೫. ಲೇಖಕರಿಗಿದ್ದ ಹಂಬಲವೇನು?

**ಈ. ಕೊಟ್ಟಿರುವ ವಾಕ್ಯಗಳ ಸಂದರ್ಭಸಹಿತ ಸ್ವಾರಸ್ಯವನ್ನು ಬರೆಯಿರಿ**

೧. "ಅಲ್ಲಿ ಮಧ್ಯಾಹ್ನ ವೇಳೆ ಸ್ನಾನಕ್ಕೆ ನೀರು ಕಾಯಿಸುವ ಅಗತ್ಯವಿಲ್ಲ."

೨. "ಗಂಡಸರೂ ರಂಗುರಾಯರೇ"

೩. "ಪ್ರಾಚೀನ ಗುಡಿಗೋಪುರಗಳು ಗೂಬೆಯ ಮನೆಗಳಾಗಿದ್ದವು"

೪. "ಚಾವಡಿಗೆ ನಕ್ಷತ್ರಲೋಕದ ಸೊಬಗನ್ನು ಕೊಡುತ್ತವೆ"

## ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**
- **ಕರ್ತರಿ ಮತ್ತು ಕರ್ಮಣಿ ಪ್ರಯೋಗ :**

ಈ ವಾಕ್ಯಗಳನ್ನು ಗಮನಿಸಿ:

| ಗುಂಪು – ೧ | ಗುಂಪು – ೨ |
|---|---|
| – ಅಣ್ಣ ಅನ್ನವನ್ನು ಉಂಡನು | – ಅಣ್ಣನಿಂದ ಅನ್ನವು ಉಣ್ಣಲ್ಪಟ್ಟಿತು |
| – ಕೃಷ್ಣ ಕಾಳಿಂಗವನ್ನು ಮರ್ದಿಸಿದನು | – ಕೃಷ್ಣನಿಂದ ಕಾಳಿಂಗವು ಮರ್ದಿಸಲ್ಪಟ್ಟಿತು |
| – ಅಕ್ಕ ತಂಗಿಯನ್ನು ಕರೆದಳು | – ಅಕ್ಕನಿಂದ ತಂಗಿಯು ಕರೆಯಲ್ಪಟ್ಟಳು |



ಮೊದಲ ಗುಂಪಿನಲ್ಲಿರುವ ಧಾತುಗಳಿಗೆ **ಲಿಂಗ ಮತ್ತು ವಚನವಾಚಕಗಳು** ಸೇರಿ ಪೂರ್ಣ ವಾಕ್ಯವಾಗಿವೆ. ಇವೇ **ಕರ್ತರಿ ಪ್ರಯೋಗ** ವಾಕ್ಯಗಳು.

**ಸೂತ್ರ: ಕ್ರಿಯಾಪದಕ್ಕೆ ಕರ್ತರಿ ಪ್ರಯೋಗದಲ್ಲಿ ಕರ್ತೃವಿನ ಲಿಂಗ, ವಚನಗಳು ಬರುತ್ತವೆ.**

ಎರಡನೆಯ ಗುಂಪಿನಲ್ಲಿರುವ ಧಾತುಗಳಿಗೆ **–ಅಲ್ಪಡು** ಪ್ರತ್ಯಯ ಸೇರಿದೆ. ಇವೇ **ಕರ್ಮಣಿ ಪ್ರಯೋಗ** ವಾಕ್ಯಗಳು.

**ಸೂತ್ರ: ಧಾತುಗಳಿಗೆ – 'ಅಲ್ಪಡು' ಎಂಬ ಪ್ರತ್ಯಯ ಸೇರಿ ಅದಕ್ಕೆ ಕಾಲಸೂಚಕ ಮತ್ತು ಆಖ್ಯಾತಪ್ರತ್ಯಯಗಳು ಸೇರಿದಾಗ ಕರ್ಮಣಿ ಪ್ರಯೋಗದ ವಾಕ್ಯಗಳಾಗುತ್ತವೆ.**

- **ನಾನಾ ಕ್ರಿಯಾರ್ಥಕಗಳು**

ಈ ವಾಕ್ಯಗಳನ್ನು ಗಮನಿಸಿ:

**– ದೇವರು ನಿಮಗೆ ಒಳ್ಳೆಯದನ್ನು ಮಾಡಲಿ**

**– ಅವರು ಪಾಠವನ್ನು ಓದಲಿ**

**– ಭೀಮನಿಗೆ ಜಯವಾಗಲಿ**

ಈ ಮೂರು ವಾಕ್ಯಗಳಲ್ಲಿ **ಮಾಡಲಿ ಓದಲಿ ಆಗಲಿ** ಎಂಬ ಕ್ರಿಯಾಪದಗಳಿವೆ. **ಮಾಡಲಿ** ಎಂಬಲ್ಲಿ **ಹಾರೈಕೆಯೂ ಓದಲಿ** ಎಂಬಲ್ಲಿ **ಸಮ್ಮತಿಯೂ ಆಗಲಿ** ಎಂಬಲ್ಲಿ **ಆಶೀರ್ವಾದವೂ** ಇದೆ.

**ಸೂತ್ರ: ಆಶೀರ್ವಾದ ಅಪ್ಪಣೆ ಆಜ್ಞೆ ಹಾರೈಕೆ ಸಮ್ಮತಿ ಇತ್ಯಾದಿ ವಿಧಿಗಳನ್ನು ಹೊಂದಿರುವ ಕ್ರಿಯಾಪದಗಳೇ ವಿಧ್ಯರ್ಥಕ ಕ್ರಿಯಾಪದಗಳು.**

ಈ ವಾಕ್ಯಗಳನ್ನು ಗಮನಿಸಿ:

**– ಕೃಷ್ಣನು ಹಣ್ಣನ್ನು ತಿನ್ನನು**

**– ಕಮಲೆಯು ಆಟಕ್ಕೆ ಬಾರಳು**

ಇಲ್ಲಿ **ತಿನ್ನನು** ಎಂಬ ಕ್ರಿಯಾಪದ **ತಿನ್ನುವುದಿಲ್ಲ** ಎಂಬ ಅರ್ಥವನ್ನೂ **ಬಾರಳು** ಎಂಬ ಕ್ರಿಯಾಪದ **ಬರುವುದಿಲ್ಲ** ಎಂಬ ಅರ್ಥವನ್ನೂ ಸೂಚಿಸುತ್ತವೆ.



**ಸೂತ್ರ: ಕ್ರಿಯೆ ನಡೆಯುವುದಿಲ್ಲ ಎಂಬ ಅರ್ಥವನ್ನು ಸೂಚಿಸುವ ಕ್ರಿಯಾಪದಗಳೇ ನಿಷೇಧಾರ್ಥಕ ಕ್ರಿಯಾಪದಗಳು.**

ಈ ವಾಕ್ಯಗಳನ್ನು ಗಮನಿಸಿ:

**– ಅವರು ನಾಳೆ ಬಂದಾರು**

**– ಚೆಂಡು ಮೇಲಕ್ಕೆ ಹೋದೀತು**

ಈ ವಾಕ್ಯಗಳಲ್ಲಿರುವ **ಬಂದಾರು, ಹೋದೀತು** ಎಂಬ ಕ್ರಿಯಾಪದಗಳು **ಸಂಶಯ** ಅಥವಾ **ಊಹೆಯನ್ನು** ಸೂಚಿಸುತ್ತವೆ.

**ಸೂತ್ರ: ಕ್ರಿಯೆ ನಡೆಯುವ ಬಗ್ಗೆ ಸಂಶಯ** ಅಥವಾ **ಊಹೆಯನ್ನು ವ್ಯಕ್ತಪಡಿಸುವಂತಹ ಪದಗಳೇ ಸಂಭಾವನಾರ್ಥಕ ಕ್ರಿಯಾಪದಗಳು.**

## ಭಾಷಾ ಚಟುವಟಿಕೆ

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ**

೧. ನಮೂದಿತ ವಾಕ್ಯಗಳಲ್ಲಿನ ಕ್ರಿಯಾಪದಗಳನ್ನು ಗುರುತಿಸಿ ಬರೆಯಿರಿ

**ದೇವರು ನಿಮಗೆ ಒಳ್ಳೆಯದನ್ನು ಮಾಡಲಿ**

**ಅವರು ಪಾಠವನ್ನು ಕಲಿತರು**

**ಅವನಿಗೆ ಜಯ ಸಿಕ್ಕಿತು**

೨. ಕರ್ತರಿ ಪ್ರಯೋಗ ವಾಕ್ಯದ ವಿಶೇಷತೆಯನ್ನು ತಿಳಿಸಿ.

೩. ವಿಧ್ಯರ್ಥಕ ಕ್ರಿಯಾಪದ ಎಂದರೇನು?

೪. ನಿಷೇಧಾರ್ಥಕ ಕ್ರಿಯಾಪದಕ್ಕೆ ಉದಾಹರಣೆಯನ್ನು ಕೊಡಿ.

೫. ಸಂಭಾವನಾರ್ಥಕ ಕ್ರಿಯಾಪದವನ್ನು ಸೂತ್ರ ಸಹಿತ ವಿವರಿಸಿ.

- **ಪಠ್ಯಾಧಾರಿತ ಪ್ರಾಯೋಗಿಕ ಭಾಷಾಭ್ಯಾಸ**

**ಆ. ಕೊಟ್ಟಿರುವ ಪದಗಳಲ್ಲಿ ಅನುಸ್ವಾರ-ವಿಸರ್ಗ ಸಹಿತ ಅಕ್ಷರಗಳನ್ನು ಗುರುತಿಸಿ ಬರೆಯಿರಿ**

ಸ್ವತಃ ಸುಂದರ ರಂಗುರಂಗಿನ ಕೆಂಪು ದುಃಖ
ಹಿಂದೊಮ್ಮೆ ಗಂಡಸರು ಅಂತಃಕರಣ ಪಂಚೆ ಅಂಗಿ ಮುಂಡಾಸು
ಅಂಬೇರ ಸಭಾಂಗಣ ಅಂತಃಪುರ ಪುನಃ ಜಂತ್ರಮಂತ್ರ ಅಂತಸ್ತು



**ಇ. ಕೊಟ್ಟಿರುವ ಪದಗಳಲ್ಲಿ ಅನುನಾಸಿಕ ಅಕ್ಷರಗಳನ್ನು ಗುರುತಿಸಿ ಬರೆಯಿರಿ**

ನಗರ ಮಧ್ಯ ಪರಿಣಾಮ ಬಣ್ಣ ನಿತ್ಯ
ಜನ ಮನೆ ಕಣಿವೆ ಮಂದಿರ ವಿಜ್ಞಾನ

## ಪೂರಕ ಓದು

- **ಕೋಟ ಶಿವರಾಮಕಾರಂತ** ಅವರ **ಅಬುವಿನಿಂದ ಬರಾಮಕ್ಕೆ** ಪ್ರವಾಸ ಕಥನ ಓದಿ



## ಗದ್ಯಪಾಠ – ೦೪

# ಆದರ್ಶ ಶಿಕ್ಷಕ ಸರ್ವೇಪಲ್ಲಿ ರಾಧಾಕೃಷ್ಣನ್

[ವ್ಯಕ್ತಿಚಿತ್ರ]

– ಸಂಗ್ರಹ

### ಮುನ್ನುಯಾರಿ

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವ್ಯಕ್ತಿಚಿತ್ರವೂ ಒಂದು. ನಿರ್ದಿಷ್ಟ ವ್ಯಕ್ತಿಯ ಜೀವನ–ಸಾಧನೆ–ಸಿದ್ಧಿಯನ್ನು ಕಲಾತ್ಮಕವಾಗಿ ದಾಖಲಿಸುವ ಕ್ರಮ. ವಿಸ್ತೃತ ಸುದೀರ್ಘ ವಿವರದ ಬರೆಹ ಜೀವನಚರಿತ್ರೆಯಾದರೆ, ಸ್ಥೂಲಚಿತ್ರಣ ವ್ಯಕ್ತಿಚಿತ್ರ. ವ್ಯಕ್ತಿ ತನ್ನ ಜೀವನದ ಘಟನೆಗಳನ್ನು ಸ್ವತಃ ಬರೆದುಕೊಂಡರೆ ಅದು ಆತ್ಮಕಥನ. ಹೀಗೆ ಆಧುನಿಕ ಕನ್ನಡದಲ್ಲಿ ಮೂರೂ ಬಗೆಯ ಸಾಹಿತ್ಯ ಕೃತಿಗಳು ರಚನೆಯಾಗಿವೆ. ಸರ್ವೇಪಲ್ಲಿ ಡಾ. ರಾಧಾಕೃಷ್ಣನ್ ಅವರದು ವಿಶಿಷ್ಟ ವ್ಯಕ್ತಿತ್ವ. ಆದರ್ಶಶಿಕ್ಷಕ, ತತ್ತ್ವಜ್ಞಾನಿ, ಉಪರಾಷ್ಟ್ರಪತಿ ಮತ್ತು ರಾಷ್ಟ್ರಪತಿಯಾಗಿ ಮಾದರಿಯಾಗಿದ್ದಾರೆ. ಅವರ ಜೀವನ–ಸಾಧನೆಯ ಸ್ಥೂಲ ನೋಟ ಪ್ರಕೃತ ಗದ್ಯಪಾಠದಲ್ಲಿ ವ್ಯಕ್ತಗೊಂಡಿದೆ.

### ಅರ್ಥೈಸಿ – ಓದಿ

| | | | | |
|---|---|---|---|---|
| ಅಸಾಮಾನ್ಯತೆ | ವಿದ್ವತ್‌ತಪ | ಹರ್ಮನ್ಸ್‌ಬರ್ಗ್ | ತತ್ತ್ವಶಾಸ್ತ್ರ | ಭಾವೋದ್ರೇಕ |
| ಪಾಶ್ಚಿಮಾತ್ಯ | ಮಂತ್ರಮುಗ್ಧ | ಆದರ್ಶಪ್ರಾಯ | ವಿದ್ಯಾರ್ಜನೆ | ವಿಶ್ವವಿಖ್ಯಾತ |



### ನಿಗದಿತ ಮೂಲ ವ್ಯಕ್ತಿಚಿತ್ರ – ಗದ್ಯ



“ನೀವೊಬ್ಬರೇ ನನ್ನನ್ನು ಒಬ್ಬ ಮನುಷ್ಯನಂತೆ ಕಂಡು ವರ್ತಿಸಿದವರು. ನೀವು ನಮ್ಮನ್ನು ಬಿಟ್ಟು ಹೋಗುತ್ತಿರುವಿರಿ. ನನಗೆ ಇದು ದುಃಖ ನೀಡಿದೆ. ನೀವು ಹೆಚ್ಚು ಕಾಲ ಬಾಳಬೇಕೆಂಬುದೇ ನನ್ನಾಸೆ. ನಾನು ಹೆಚ್ಚು ಕಾಲ ಬಾಳುವುದಿಲ್ಲ” ರಷ್ಯಾ ದೇಶದ ಅಧ್ಯಕ್ಷ ಸ್ಟಾಲಿನ್ ಅವರು ರಾಧಾಕೃಷ್ಣನ್ ಅವರಿಗೆ ಮಾಸ್ಕೋದಲ್ಲಿ ನೀಡಿದ ಬೀಳ್ಕೊಡುಗೆ ಸಮಾರಂಭದಲ್ಲಿ ಹೀಗೆ ಹೇಳಿದರು. ಅಷ್ಟೇ ಅಲ್ಲ “ಅಶೋಕನು ಕಳಿಂಗ ಯುದ್ಧದ ಅನಂತರ ಶ್ರೇಷ್ಠ ಮನುಷ್ಯನಾದಂತೆ ನೀವೂ ಆಗುವಿರಿ” ಎಂದು ತಮ್ಮ ಪ್ರಥಮ ಭೇಟಿಯಲ್ಲಿ ರಾಧಾಕೃಷ್ಣನ್ ಹೇಳಿದ ಮಾತುಗಳನ್ನು ಸ್ಮರಿಸಿಕೊಂಡರು. ಪ್ರತಿಯೊಂದು ಧರ್ಮದ ಅಂತಿಮ ಸತ್ಯ ಒಂದೇ. ಪ್ರತಿ ಧರ್ಮವೂ ಅದರ ಶ್ರೇಷ್ಠ ಗುಣವನ್ನು ತೋರುತ್ತದೆ. ಅದನ್ನು ಅಳವಡಿಸಿಕೊಂಡಾಗ ಯಾವುದೇ ಧರ್ಮದ ಅಸಾಮಾನ್ಯತೆ ಅರಿವಾಗುವುದೆಂಬ ವಿಷಯವನ್ನು ಅವರು ಎಲ್ಲ ಧರ್ಮಗಳ ಆಳವಾದ ಅಧ್ಯಯನದಿಂದ ಸಾಧಿಸಿ ತೋರಿಸಿದರು. ರಾಧಾಕೃಷ್ಣನ್ ತಮ್ಮ ವಿದ್ವತ್ ತಪದ ಫಲವಾಗಿ ಯುಗದ ಪರಿವರ್ತನಶೀಲ ಪ್ರಭಾವಿ ವ್ಯಕ್ತಿಗಳಲ್ಲಿ ಒಬ್ಬರೆನಿಸಿದರು.

ರಾಧಾಕೃಷ್ಣನ್ ಅವರು ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಗಡಿಯಲ್ಲಿರುವ ತಿರುತ್ತಣಿ ಎಂಬ ಪುಟ್ಟ ಗ್ರಾಮದಲ್ಲಿ ಕ್ರಿಸ್ತ ಶಕ ೧೮೮೮ ಸೆಪ್ಟೆಂಬರ್ ೫ ರಂದು ಜನಿಸಿದರು. ತಂದೆ ವೀರಸ್ವಾಮಿ, ತಾಯಿ ಸೀತಮ್ಮ. ಅವರ ಮುತ್ತಜ್ಜ ವೀರಸ್ವಾಮಿ ಆಂಧ್ರದ ಸರ್ವೇಪಲ್ಲಿಯಿಂದ ತಮಿಳುನಾಡಿನ ತಿರುತ್ತಣಿಗೆ ಬಂದು ನೆಲೆಸಿದರು. ಪತ್ನಿ ಶಿವಕಾಮು(ಪದ್ಮ) ರಾಧಾಕೃಷ್ಣನ್ ಅವರ ಸಾಧನೆಯಲ್ಲಿ ವಿಶೇಷ ಸಹಕಾರ ನೀಡಿದರು.

ವೀರಸ್ವಾಮಿ ಅವರಿಗೆ ತಮ್ಮ ಮಗ ಆಂಗ್ಲ ಭಾಷೆ ಕಲಿಯುವುದು ಇಷ್ಟವಿರಲಿಲ್ಲ. ದೇಶೀ ಭಾಷೆಯಾಗಿದ್ದ ಸಂಸ್ಕೃತವನ್ನು ಕಲಿಯಲಿ ಎಂಬ ಅಪೇಕ್ಷೆ. ಆದರೆ ಅದೂ ಸಾಧ್ಯವಾಗಲಿಲ್ಲ. ಅನಂತರ ತಿರುಪತಿಯ ಹರ್ಮನ್ಸ್ ಬರ್ಗ್ ಮಿಷನರಿ ಶಾಲೆಗೆ ಸೇರಿಸಿದರು. ಅಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಹೆಚ್ಚು ಮನ್ನಣೆಯಿತ್ತು. ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದ ರಾಧಾಕೃಷ್ಣನ್ ವೆಲ್ಲೂರಿನ ವೂರ್ಸ್ ಕಾಲೇಜಿಗೆ ಬಿ. ಎ. ಪೂರ್ವದ ಎರಡು ವರ್ಷಗಳ ಕಲಾ ಪದವಿಗೆ ಸೇರಿದರು. ಮಿಷನರಿ ಶಾಲೆಯ ಶಿಸ್ತಿನ ತರಬೇತಿಯಿಂದ ರಾಧಾಕೃಷ್ಣನ್ ಅವರ ಮನಸ್ಸು ನಿಧಾನವಾಗಿ ಅಧ್ಯಯನದತ್ತ ವಾಲಿತು. ಗ್ರಹಣಶಕ್ತಿ ಚುರುಕಾಯಿತು. ವಿದ್ಯಾರ್ಥಿ ಜೀವನದ ಗುರಿಯ ಅರಿವು ಅವರಿಗಾಯಿತು. ಶಿಸ್ತು ಗಾಂಭೀರ್ಯಗಳೊಡನೆ ಅಧ್ಯಯನಶೀಲರಾಗ ತೊಡಗಿದರು. ವಿದ್ಯಾರ್ಥಿವೇತನ ಪಡೆದು ಅಂದಿನ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಬಿ. ಎ. ಪದವಿಗೆ ಸೇರಿದರಲ್ಲದೆ ತತ್ವಶಾಸ್ತ್ರದ ಉತ್ತಮ ವಿದ್ಯಾರ್ಥಿ ಎನಿಸಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಮನೆಯ ಜವಾಬ್ದಾರಿ ಹೊತ್ತ ಇವರು ಕಿರಿಯ ಸಹಪಾಠಿಗಳಿಗೆ ಮನೆಯ ಪಾಠ ಹೇಳಿ ಹಣಗಳಿಸುತ್ತಿದ್ದರು, ಆರ್ಥಿಕ ಪರಿಸ್ಥಿತಿ ತಮ್ಮ ಸಾಧನೆಯಲ್ಲಿ ನಿವಾರಿಸಲಾಗದ ತೊಡಕೆಂದು ಭಾವಿಸಲಿಲ್ಲ. ಬಡತನದ ಬೇಗೆಯಲ್ಲೇ ತಮ್ಮ ಆಸಕ್ತಿಯ ವಿಷಯವಾದ ತತ್ವಶಾಸ್ತ್ರದಲ್ಲಿ ಎಂ.ಎ. ಪದವಿಯನ್ನು ಪಡೆದರು.

ರಾಧಾಕೃಷ್ಣನ್ ಅವರು ಶಿಕ್ಷಣ ಇಲಾಖೆಯ ಉಪಸಹಾಯಕ ಇನ್‌ಸ್ಪೆಕ್ಟರ್ ಆಗಿ ಮದ್ರಾಸಿನಲ್ಲಿ (ಈಗಿನ ಚೆನ್ನೈ) ಮೊದಲ ಸೇವೆಯನ್ನು ಆರಂಭಿಸಿದರು. ಅನಂತರ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜು, ಸಯ್ಯದ್ ಪೇಟೆಯ ಟೀಚರ್ಸ್ ಟ್ರೈನಿಂಗ್ ಕಾಲೇಜು, ಆಂಧ್ರದ ಅನಂತಪುರ ಹಾಗೂ ರಾಜಮುಂಡ್ರಿಯ ಸರ್ಕಾರಿ ಕಲಾಕಾಲೇಜುಗಳಲ್ಲಿ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಸಂಸ್ಕೃತವನ್ನು ಪಂಡಿತರಿಂದ ಕಲಿತರಲ್ಲದೇ ಗಾಂಧೀಜಿ ಅವರನ್ನು ಭೇಟಿ ಮಾಡಿ ರಾಷ್ಟ್ರೀಯ ಹೋರಾಟವನ್ನು ಬೆಂಬಲಿಸಿ ಲೇಖನಗಳನ್ನು ಬರೆದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರದ ಉಪಪ್ರಾಧ್ಯಾಪಕರಾಗಿ ಹಾಗೂ ಕೋಲ್ಕೊತಾದಲ್ಲಿ (ಹಿಂದಿನ ಕಲ್ಕತ್ತಾ) ಪ್ರಾಧ್ಯಾಪಕರಾಗಿ ಸಲ್ಲಿಸಿದ ಸೇವೆ ಸ್ಮರಣೀಯ. ಇದಲ್ಲದೆ ಆಂಧ್ರ, ದೆಹಲಿ, ಬನಾರಸ್ ವಿಶ್ವವಿದ್ಯಾಲಯಗಳಲ್ಲಿ ಕುಲಪತಿಯಾಗಿ ಸೇವೆ ಸಲ್ಲಿಸಿ, ಅವುಗಳ ಪುರೋಭಿವೃದ್ಧಿಗೆ ಶ್ರಮಿಸಿದರು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲೂ ಸಂದರ್ಶಕ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿದರು. ರಾಧಾಕೃಷ್ಣನ್ ಅವರ ಬೋಧನಾ ಶೈಲಿ, ನಿರರ್ಗಳತೆ, ವಿಷಯದ ಮೇಲಿನ ಪ್ರಭುತ್ವ ವಿದ್ಯಾರ್ಥಿಗಳನ್ನು ಬಹುಬೇಗ ಆಕರ್ಷಿಸಿತು. ತಮ್ಮ ಪ್ರಾಧ್ಯಾಪಕತ್ವವನ್ನು ಯಾವಾಗಲೆಂದರೆ ಆವಾಗ ಕಳಚಿ ಏರು ಜವ್ವನದ ಯುವಕರಂತೆ ಹಾಸ್ಯ ವಿನೋದಗಳಲ್ಲಿ ತೊಡಗುತ್ತಿದ್ದರು. ಶಿಕ್ಷಕನೊಬ್ಬನ ಗೌರವವು ಬೋಧನೆಯಿಂದಲೇ ವೃದ್ಧಿಸುತ್ತದೆ ಜತೆಗೆ ವ್ಯಕ್ತಿತ್ವದ ಸೌಜನ್ಯ, ಸ್ನೇಹಶೀಲತೆ ಎಲ್ಲರ ಗಮನವನ್ನೂ ಸೆಳೆಯುತ್ತದೆ.

ಅವರು ಕೋಲ್ಕೊತ ವಿಶ್ವವಿದ್ಯಾಲಯದ ತತ್ವಶಾಸ್ತ್ರ ಪ್ರಾಧ್ಯಾಪಕರಾಗಿ ನೇಮಕಗೊಂಡಾಗ ಮೈಸೂರಿನಿಂದ ಹೊರಟ ದಿನ ಅವರಿಗೆ ಕೊಟ್ಟಂತಹ ವೈಭವದ ಬೀಳ್ಕೊಡುಗೆ ಯಾವ ಚಕ್ರವರ್ತಿಗೂ ದೊರೆತಿರಲಾರದು. ಅಂದಿನ ವಾತಾವರಣದಲ್ಲಿದ್ದುದು ವೈಭವಕ್ಕಿಂತ ಹೆಚ್ಚಾಗಿ ಹೃದಯದಿಂದ ನೇರವಾಗಿ ಹೊರಹೊಮ್ಮಿದ ಗುರುಪ್ರೇಮ. ವಿದ್ಯಾರ್ಥಿಗಳೆಲ್ಲರಲ್ಲೂ ಭಕ್ತಿಪ್ರೇಮದ ಚಿಲುಮೆ ಉಕ್ಕಿಬಂತು. ರಾಧಾಕೃಷ್ಣನ್ ಅವರನ್ನು ಮಹಾರಾಜ ಕಾಲೇಜಿನಿಂದ ರೈಲು ನಿಲ್ದಾಣಕ್ಕೆ ಕರೆದೊಯ್ಯುವಾಗ ಸಾರೋಟಿಗೆ ಕುದುರೆಯನ್ನು ಕಟ್ಟಲಿಲ್ಲ. ಸ್ವತಃ ವಿದ್ಯಾರ್ಥಿಗಳೇ ಎಳೆದೊಯ್ದರು. ರಾಧಾಕೃಷ್ಣನ್ ಅವರಿಗಾಗಿ ಕಾದಿರಿಸಿದ್ದ ಕಂಪಾರ್ಟ್‌ಮೆಂಟನ್ನು, ಒರಗುದಿಂಬು ಹಾಗೂ ರತ್ನಗಂಬಳಿಯನ್ನು ಹಾಸಿ ಮಲಗುವ ಸೀಟನ್ನು, ನೆಲವನ್ನು ಹೂವಿನಿಂದ ಸುಪ್ಪತ್ತಿಗೆಯಂತೆ ಮಾಡಿ ದೈವ ಮಂದಿರವನ್ನು ಭಕ್ತರು ಅಲಂಕರಿಸುವಂತೆ ಅಲಂಕರಿಸಲಾಗಿತ್ತು. "ರಾಧಾಕೃಷ್ಣನ್ ಅವರಿಗೆ ಜಯವಾಗಲಿ" ಎಂಬ ಕೂಗು ರೈಲ್ವೆ ಸ್ಟೇಷನ್ನಿನ ಆವರಣದಲ್ಲೆಲ್ಲ ಮೊಳಗುತ್ತಿತ್ತು. ಆ ದಿನ ಭಾವೋದ್ರೇಕದಿಂದ ಅದೆಷ್ಟು ಜನ ಅತ್ತರೋ!. ವಿದ್ಯಾರ್ಥಿಗಳು ತೋರಿದ ವಿಶ್ವಾಸ ಅವರ ಕಣ್ಣಿನಲ್ಲೂ ನೀರು ತಂದಿತು.

ಸ್ವಾತಂತ್ರ್ಯ ಪೂರ್ವದಲ್ಲೂ ಸ್ವಾತಂತ್ರ್ಯ ಬಂದ ಆರಂಭದಲ್ಲೂ ಪಾಶ್ಚಿಮಾತ್ಯರು ಭಾರತಕ್ಕೆ ಮನ್ನಣೆ ನೀಡುತ್ತಿರಲಿಲ್ಲ. ಭಾರತದ ವಿಷಯದಲ್ಲಿ ಪಾಶ್ಚಾತ್ಯರಿಗಿದ್ದ ಈ ಕಲ್ಪನೆಯನ್ನು ತೊಡೆದು ಹಾಕಿ ಅದರ ಸ್ಥಾನದಲ್ಲಿ ನ್ಯಾಯ ಸಮ್ಮತವಾದ ಬೇರೊಂದು ಕಲ್ಪನೆಯನ್ನಿಡುವುದು ಅವಶ್ಯವಾಗಿತ್ತು. ಆ ಕೆಲಸವನ್ನು ಸ್ವಲ್ಪಮಟ್ಟಿಗಾದರೂ ರಾಧಾಕೃಷ್ಣನ್ ಅವರು ಮಾಡಿದರು. ಅವರ ಬರೆವಣಿಗೆಯ ಮೂಲಕ ಪಾಶ್ಚಾತ್ಯರಿಗೆ ಭಾರತೀಯ ಸಂಸ್ಕೃತಿಯ ಪರಿಚಯವಾಯಿತು. ಅಲ್ಲದೆ ಅವರು ಭಾರತದ ಪ್ರತಿನಿಧಿಯಾಗಿ ಇಂಗ್ಲೆಂಡ್, ಅಮೆರಿಕಾ ಮುಂತಾದ ದೇಶಗಳಿಗೆ ಹೋಗಿ ಭಾಷಣ ಮಾಡಿದಾಗ ಅವರ ವಾಕ್ಶಕ್ತಿಯೂ ತರ್ಕಬದ್ಧವಾದ ವಿಚಾರ ಸರಣಿಯೂ ಎಲ್ಲರನ್ನೂ ಬೆರಗುಗೊಳಿಸಿತು. ಅವರ ಭಾಷಣ ಕೇಳಿದ ಅಲ್ಲಿನ ಜನ ಮಂತ್ರಮುಗ್ಧರಾಗಿ ಯಾರ ಪ್ರೇರಣೆಯೂ ಇಲ್ಲದೆ, ಎದ್ದುನಿಂತು ಜಯಕಾರ ಮಾಡಿ ಗೌರವ ಸೂಚಿಸಿದರು.



ರಾಧಾಕೃಷ್ಣನ್ ಅವರು ಹಿಂದೂ ಧರ್ಮದ ತತ್ವಶಾಸ್ತ್ರ ಮತ್ತು ಸಾಹಿತ್ಯವನ್ನೆಲ್ಲ ಅಧ್ಯಯನ ಮಾಡಿದರು. ಯೂರೋಪಿಯನ್ ತತ್ವಶಾಸ್ತ್ರ ಮತ್ತು ಸಾಹಿತ್ಯದ ಅಭಿವ್ಯಕ್ತ ವಿಚಾರಗಳಿಂದ ಅವರ ವಿಶ್ವದೃಷ್ಟಿ ಮತ್ತು ತಾತ್ವಿಕ ದೃಷ್ಟಿಕೋನ ಪ್ರಭಾವಿತವಾಯಿತು. ಸ್ವಾಮಿ ವಿವೇಕಾನಂದರ ವಿಚಾರಧಾರೆ ಅವರ ಮನವನ್ನು ಆಕರ್ಷಿಸಿತು. ಅವರು "ಹಿಂದೂ ಧರ್ಮವು ಒಂದು ವೈಚಾರಿಕ ಜೀವನ ಮಾರ್ಗವೆಂದೂ, ನೈತಿಕ ಗುಣಾತ್ಮಕ ವಿಷಯಗಳಿಂದ ಕೂಡಿದ್ದು, ಮಾನವನ ಆಂತರಿಕ ಜೀವನದ ಬಗ್ಗೆ ಪ್ರಾಮುಖ್ಯತೆವುಳ್ಳದ್ದಾಗಿದೆ. ಹಿಂದೂಧರ್ಮವಾಗಲಿ, ವೇದಾಂತವಾಗಲಿ ಅಸತ್ಯವನ್ನು ಹೇಳುವುದಿಲ್ಲ. ಭಾರತೀಯ ಚಿಂತನೆಗಳು ಯಾವುದೋ ವಿಚಿತ್ರ ಮತ್ತು ನಿಗೂಢ ಪರಿಕಲ್ಪನೆಗಳಾಗಿಲ್ಲ, ಜೀವನದ ನಾಡಿಮಿಡಿತಗಳನ್ನು ಸೂಕ್ಷ್ಮಮನಸ್ಸಿನ ಚಿಂತನೆಗಳನ್ನು ತಿಳಿಯಪಡಿಸುವುದಾಗಿದೆ" ಎಂದು ಸರಳವಾಗಿ ಹೇಳಿದರು. ಶಿಕ್ಷಣದ ಮಹತ್ವವನ್ನು ಮನಗಂಡ ಇವರು "ಶಿಕ್ಷಣವು ಜೀವನದ ಅವಿಭಾಜ್ಯ ಅಂಗ. ಅದು ಮಾನವನನ್ನು ಪರಿಪೂರ್ಣತೆ ಹಾಗೂ ಸುಸಂಸ್ಕೃತಿಯತ್ತ ಒಯ್ಯುವ ಸಾಧನ ಮಾರ್ಗ" ಎಂದಿದ್ದಾರೆ. ಕೆನಡಾ ದೇಶದ ರೇಡಿಯೋ ಪ್ರಸಾರ ಭಾಷಣದಲ್ಲಿ "ಮಾನವತೆಯೇ ವಿಶ್ವ ಅನುಸರಿಸಬೇಕಾದ ಮಾರ್ಗ" ಎಂದು ತಮ್ಮ ನಿಲುವನ್ನು ಅಭಿವ್ಯಕ್ತಿಸಿದರು.

ರಾಧಾಕೃಷ್ಣನ್ ಅವರ ಬಹುಮುಖ ಪ್ರತಿಭೆಯನ್ನು ಹತ್ತಿರದಿಂದ ಬಲ್ಲವರಾಗಿದ್ದ ನೆಹರೂ ಅವರು ಇವರನ್ನು ಮಾಸ್ಕೋದಲ್ಲಿ ಭಾರತದ ರಾಯಭಾರಿಯಾಗಿ ನೇಮಿಸಿದರು. ರಷ್ಯಾದ ಅಧ್ಯಕ್ಷರಾಗಿದ್ದ ಸ್ಟಾಲಿನ್ ಅವರ ಸ್ನೇಹ ಸೌಹಾರ್ದಗಳ ಭೇಟಿ ಫಲಪ್ರದವಾಗಿ ಉಭಯ ದೇಶಗಳ ಬಾಂಧವ್ಯ ವೃದ್ಧಿಸಿತು. ಇದರಿಂದ ಸಂತಸಗೊಂಡ ನೆಹರು ಅವರು ರಾಧಾಕೃಷ್ಣನ್ ಅವರನ್ನು ಮೆಚ್ಚಿ ಪ್ರಶಂಸಿಸಿದರು. ಅನಂತರ ಇವರನ್ನು ಭಾರತದ ಉಪರಾಷ್ಟ್ರಪತಿ ಸ್ಥಾನಕ್ಕೆ ನಾಮಕರಣ ಮಾಡಲಾಯಿತು. ಎರಡು ಬಾರಿ ಉಪರಾಷ್ಟ್ರಪತಿಗಳಾಗಿ ರಾಷ್ಟ್ರಕ್ಕೆ ಅನುಪಮ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಹಲವಾರು ರಾಷ್ಟ್ರಗಳಿಗೆ ಭೇಟಿ ನೀಡಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಶಾಂತಿ ಸೌಹಾರ್ದವನ್ನು ಕಾಪಾಡುವಲ್ಲಿ ಯಶಸ್ವಿಯಾದರು. ಇವರ ಪ್ರವಾಸದ ಉದ್ದೇಶ ಭಾರತೀಯ ಜೀವನ, ಸಂಸ್ಕೃತಿ, ಚಿಂತನೆ ಮತ್ತು ಮಾನವಧರ್ಮವನ್ನು ಪ್ರಚಾರ ಮಾಡುವುದಾದ್ದರಿಂದ ವಿಶ್ವದ ಬುದ್ಧಿವಂತರ ಮೆಚ್ಚುಗೆ ಗಳಿಸಿದರು. ವಿಶ್ವದೆಲ್ಲೆಡೆಗಳಿಂದ ಶ್ಲಾಘಿಸಲ್ಪಟ್ಟ ಇವರನ್ನು ಪದವಿ ಹಾಗೂ ಹುದ್ದೆ ಅನಾಯಾಸವಾಗಿ ಹಂತ ಹಂತವಾಗಿ ಅರಸಿ ಬಂದವು. ಉಪರಾಷ್ಟ್ರಪತಿಯ ಸೇವೆಯನ್ನು ಯಶಸ್ವಿಯಾಗಿ ನಿರ್ವಹಿಸಿದ ಅನಂತರ ರಾಷ್ಟ್ರಪತಿ ಸ್ಥಾನಕ್ಕೆ ಸರ್ವಾನುಮತದಿಂದ ನಾಮಕರಣ ಮಾಡಲಾಯಿತು. ಅವರಿಗೆ ಬರುತ್ತಿದ್ದ ಹತ್ತು ಸಾವಿರ ರೂಪಾಯಿಗಳ ವೇತನದಲ್ಲಿ ಎರಡು ಸಾವಿರದ ಐನೂರು ರುಪಾಯಿಗಳನ್ನು ಮಾತ್ರ ಪಡೆದು, ಉಳಿದ ಹಣವನ್ನು ಪ್ರಧಾನಮಂತ್ರಿಗಳ ಪರಿಹಾರನಿಧಿಗೆ ವಂತಿಗೆಯಾಗಿ ನೀಡುತ್ತಿದ್ದರು.

ಇವರ ಸ್ಮರಣೀಯ ಸೇವೆಯನ್ನು ಗುರುತಿಸಿ ಭಾರತ ಸರ್ಕಾರದ ಅತ್ಯುನ್ನತ ಪ್ರಶಸ್ತಿಯಾದ 'ಭಾರತರತ್ನ'ವನ್ನು ನೀಡಿ ಗೌರವಿಸಲಾಯಿತು. ಬ್ರಸೆಲ್ಸ್‌ನ ಫ್ರೀ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯನ್ನು ಪ್ರದಾನ ಮಾಡಿತು. ಭಾರತೀಯ ವಿದ್ಯಾಭವನದ 'ಬ್ರಹ್ಮವಿದ್ಯಾಭಾಸ್ಕರ' ಬಿರುದಿಗೂ ಪಾತ್ರರಾದರು. ಹೀಗೆ ಇವರಿಗೆ ದೇಶ ವಿದೇಶಗಳ ಹಲವಾರು ಗೌರವ ಪದವಿಗಳು ದೊರಕಿದವು. ಭಾರತ ಸರ್ಕಾರ ಸೆಪ್ಟೆಂಬರ್ ೫ರಂದು ಡಾ. ರಾಧಾಕೃಷ್ಣನ್ ಅವರ ಜನ್ಮ ದಿನವನ್ನು ೧೯೬೨ ರಿಂದ 'ರಾಷ್ಟ್ರೀಯ ಶಿಕ್ಷಕರ ದಿನ' ಎಂದು ಘೋಷಿಸಿ ಪ್ರತಿವರ್ಷವೂ ಆಚರಿಸಲು ನಿರ್ಧರಿಸಿತು.



ರಾಧಾಕೃಷ್ಣನ್ ಅವರ ಬಾಹ್ಯರೂಪ ಎತ್ತರವಾದ ನಿಲುವು, ಬಿಸ್ಕೆಟ್ ಬಣ್ಣದ ರೇಷ್ಮೆಯ ನಿಲುವಂಗಿ, ಶುಭ್ರವೂ ನಿರಾಡಂಬರವೂ ಆದ ಬಿಳಿಯ ಪಂಚೆ ಮತ್ತು ರುಮಾಲು, ಕೋಪ ಸೂಚಕವಲ್ಲದ ಹುಬ್ಬು, ಯಾವುದೋ ಸಮಸ್ಯೆಯ ಒಳಹೋಗುವಂತಿರುವ ಕಣ್ಣನೋಟ, ಮುಗುಳುನಗೆಯ ಸುಳಿವು ಇವು ಭಾರತೀಯರೆಲ್ಲರಿಗೂ ಪರಿಚಿತ. ಪ್ರಪಂಚದ ಫ್ಯಾಷನ್ ಎಷ್ಟೇ ಬದಲಾದರೂ ರಾಧಾಕೃಷ್ಣನ್ ತಮ್ಮ ವೇಷಭೂಷಣಗಳನ್ನು ಕೊನೆಯವರೆಗೂ ಜತನವಾಗಿ ಉಳಿಸಿಕೊಂಡಿದ್ದರು.

ರಾಧಾಕೃಷ್ಣನ್ ಅವರು ಧರ್ಮ, ಸಂಸ್ಕೃತಿ, ಶಿಕ್ಷಣ, ತತ್ವಶಾಸ್ತ್ರ, ಮನಶ್ಶಾಸ್ತ್ರ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಹಲವಾರು ಮೌಲ್ಯಯುತ ಕೃತಿಗಳನ್ನು ರಚಿಸಿದ್ದಾರೆ. 'ಇಂಡಿಯನ್ ಫಿಲಾಸಫಿ', 'ದಿ ಹಿಂದೂ ವ್ಯೂ ಆಫ್ ಲೈಫ್', 'ಆನ್ ಐಡಿಯಾಲಿಸ್ಟ್ ವ್ಯೂ ಆಫ್ ಲೈಫ್', 'ಈಸ್ಟ್ ಅಂಡ್ ವೆಸ್ಟ್ ಇನ್

ರಿಲಿಜನ್', ಕಾಂಟೆಂಪರರಿ ಇಂಡಿಯನ್ ಫಿಲಾಸಫಿ' ಇವು ಅವರ ಪ್ರಮುಖ ಕೃತಿಗಳು. ಶ್ರೀಯುತರು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರೂ ಅಹುದು. ರಾಷ್ಟ್ರಪತಿ ಹುದ್ದೆಯಿಂದ ನಿವೃತ್ತಿ ಹೊಂದಿದ ಅನಂತರ ಮದ್ರಾಸಿಗೆ (ಚೆನ್ನೈ) ಹಿಂದಿರುಗಿದರು.

ಶಿಕ್ಷಕ ಹುದ್ದೆಯಿಂದ ರಾಷ್ಟ್ರಪತಿ ಹುದ್ದೆಯವರೆಗೆ ಹಂತಹಂತವಾಗಿ ಮೇಲೇರಿದ ಮಹಾನ್ ನಾಯಕ ಕ್ರಿಸ್ತ ಶಕ ೧೯೭೫ ರಲ್ಲಿ ಇಹಲೋಕ ತ್ಯಜಿಸಿದರು. ಅವರು ವಿದ್ಯಾರ್ಜನೆಯ ಜತೆಗೆ ಅಪಾರ ಲೋಕಾನುಭವ ಮತ್ತು ಜೀವನಾನುಭವ ಪಡೆದವರು. ಅಷ್ಟೇ ಅಲ್ಲದೆ ಶ್ರೇಷ್ಠ ಶಿಕ್ಷಣ ತಜ್ಞ, ಮಹಾ ತತ್ವಜ್ಞಾನಿ ಹಾಗೂ ಮಾನವತಾವಾದಿಯಾಗಿ ಬಹುಮುಖ ಪ್ರತಿಭೆಯಿಂದ ವಿಶ್ವವಿಖ್ಯಾತರಾಗಿರುವರು.

## ಭಾವ – ಆಕರ

**ಡಾ. ಎಸ್. ರಾಧಾಕೃಷ್ಣನ್** ಅವರು ಭಾರತದ ತತ್ವಜ್ಞಾನ ಕ್ಷೇತ್ರದ ಅಸಾಮಾನ್ಯ ಪ್ರತಿಭೆ. ಇವರು ತಾತ್ವಿಕರೂ ದಾರ್ಶನಿಕರೂ ಹೌದು. ಆಧ್ಯಾತ್ಮಿಕ ಸಂಪತ್ತನ್ನೂ ಬೌದ್ಧಿಕ ನಿಲುವನ್ನು ಪ್ರಚುರಪಡಿಸಿದ ರಾಜಕೀಯ ಧುರೀಣರು. ಇವರ ವಿದ್ವತ್ಪೂರ್ಣ ವಿಚಾರ ಮತ್ತು ಚಿಂತನೆ ಉದ್ಬೋಧಕವೂ ಸ್ಫೂರ್ತಿಯುತವೂ ಆಗಿವೆ. ಆದರ್ಶ ಶಿಕ್ಷಕರಾಗಿದ್ದ ಇವರು ಗುರುವಿನ ಸ್ಥಾನ ಹಾಗೂ ಗೌರವವನ್ನು ಹೆಚ್ಚಿಸಿ, ಆದರ್ಶ ಸಮಾಜದ ನಿರ್ಮಾಣಕ್ಕೆ ಶಿಕ್ಷಕರ ಪಾತ್ರ ಅಗತ್ಯವೆಂಬುದನ್ನು ತೋರಿಸಿಕೊಟ್ಟರು. ಆತ್ಮವಂಚನೆ ಇಲ್ಲದೆ ಶ್ರದ್ಧಾಪೂರ್ವಕವಾಗಿ ಸಚ್ಚಾರಿತ್ರ್ಯ ಮೌಲ್ಯಗಳನ್ನು ವೃದ್ಧಿಸಿಕೊಂಡು ಭಾರತದ ರಾಷ್ಟ್ರಪತಿಗಳಾಗಿ ಅನುಪಮ ಸೇವೆಗೈದವರು. ಇಂಥ ಮೇರು ಆದರ್ಶ ವ್ಯಕ್ತಿತ್ವದ ಡಾ. ಎಸ್. ರಾಧಾಕೃಷ್ಣನ್ ಅವರ ಜೀವನ ಸಾಧನೆಯನ್ನು ಪರಿಚಯಿಸುವುದೇ ಪ್ರಸ್ತುತ ಗದ್ಯಭಾಗದ ಆಶಯ ಭಾವ.

* * * *

ಪ್ರಕೃತ **ಆದರ್ಶ ಶಿಕ್ಷಕ ಸರ್ವೆಪಲ್ಲಿ ರಾಧಾಕೃಷ್ಣನ್** ವ್ಯಕ್ತಿಚಿತ್ರ ಗದ್ಯ ಭಾಗವನ್ನು **ಕೆ. ಎಸ್. ರತ್ನಮ್ಮ** ಅವರ **ಡಾ. ಎಸ್. ರಾಧಾಕೃಷ್ಣನ್ – ಜೀವನ ಸಾಧನೆ** ಮತ್ತು **ಎ.ಎನ್. ಮೂರ್ತಿರಾವ್** ಅವರ **ಚಿತ್ರಗಳು – ಪತ್ರಗಳು** ಕೃತಿಗಳ ಆಧಾರದಿಂದ ಪಠ್ಯಪುಸ್ತಕ ರಚನಾ ಸಮಿತಿ ಸಿದ್ಧ ಪಡಿಸಿ, ನಿಗದಿ ಮಾಡಿದೆ.



## ಪದ – ಗದ್ಯಾರ್ಥ

ಗ್ರಹಣ ಶಕ್ತಿ–ವಿಷಯವನ್ನು ತಿಳಿದುಕೊಳ್ಳುವ ಸಾಮರ್ಥ್ಯ; ಬೇಗೆ–ಸಂಕಟ; ಮೊಳಗು–ಧ್ವನಿಮಾಡು; ಭಾವೋದ್ರೇಕ–ಭಾವನಾ ಪರವಶತೆ; ಅನುಪಮ–ಎಣೆಯಿಲ್ಲದ; ವ್ಯಾಪಕ–ವಿಸ್ತಾರವಾದ; ಬೆರಗು–ಆಶ್ಚರ್ಯ; ಬುನಾದಿ–ತಳಹದಿ, ಅಡಿಪಾಯ; ಅಮರ–ಶಾಶ್ವತ; ಮಂತ್ರಮುಗ್ಧ–ಮೌನ, ಆಶ್ಚರ್ಯಚಕಿತ

## ಪಠ್ಯಾಧಾರ ಟಿಪ್ಪಣಿ

**ಪ್ರೆಸಿಡೆನ್ಸಿ ಕಾಲೇಜು:** ಬ್ರಿಟಿಷರು ಮದ್ರಾಸು(ಚೆನ್ನೈ), ಬೊಂಬಾಯಿ(ಮುಂಬೈ), ಕೊಲ್ಕತ್ತಾ(ಕಲ್ಕತ್ತಾ)ಗಳಲ್ಲಿ ನಡೆಸುತ್ತಿದ್ದ ಕಾಲೇಜು

**ಆಕ್ಸ್‌ಫರ್ಡ್:** ಇಂಗ್ಲೆಂಡಿನಲ್ಲಿರುವ ಹಳೆಯ ವಿಶ್ವವಿದ್ಯಾನಿಲಯ

**ಕಂಪಾರ್ಟ್‌ಮೆಂಟ್:** ರೈಲುಬೋಗಿ

**ಸಾರೋಟ್:** ಕುದುರೆಗಳನ್ನು ಕಟ್ಟಿ ಓಡಿಸುವ ನಾಲ್ಕು ಚಕ್ರದ ರಥ/ಗಾಡಿ

**ಮಿಷನರಿ ಶಾಲೆ:** ಕ್ರೈಸ್ತ ಪಾದ್ರಿಗಳು ನಡೆಸುವ ಶಾಲೆ

**ಪಾಶ್ಚಿಮಾತ್ಯ:** ಪಶ್ಚಿಮ ದೇಶಗಳಿಗೆ ಸಂಬಂಧಿಸಿದ (ಯೂರೋಪ್ ಅಮೆರಿಕಾ ಇತ್ಯಾದಿ)

**ಭಾರತರತ್ನ:** ಭಾರತ ಸರ್ಕಾರ ನೀಡುವ ಅತ್ಯುನ್ನತ ಪ್ರಶಸ್ತಿ

## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**

**ಅ. ಹೊಂದಿಸಿ ಬರೆಯಿರಿ**

| 'ಅ' ಪಟ್ಟಿ | 'ಆ' ಪಟ್ಟಿ |
|---|---|
| ೧. ಸ್ಟಾಲಿನ್ | ರಾಷ್ಟ್ರೀಯ ಶಿಕ್ಷಕರ ದಿನಾಚರಣೆ |
| ೨. ಸರ್ವೇಪಲ್ಲಿ | ಮಿಷನರಿ ಶಾಲೆ |
| ೩. ಹರ್ಮನ್ಸ್ ಬರ್ಗ್ | ಆಂಧ್ರ |
| ೪. ಭಾರತೀಯ ವಿದ್ಯಾಭವನ | ಮಾಸ್ಕೊ |
| ೫. ಆಕ್ಸಫರ್ಡ್ | ಭಾರತರತ್ನ |
| ೬ ಸೆಪ್ಟೆಂಬರ್೦೫ | ವಿಶ್ವವಿದ್ಯಾಲಯ |
| | ಬ್ರಹ್ಮವಿದ್ಯಾಭಾಸ್ಕರ |
| | ಸ್ವಾತಂತ್ರ್ಯ ದಿನಾಚರಣೆ |
| | ಅಮೆರಿಕಾ |



**ಆ. ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ನೀಡಿರುವ ನಾಲ್ಕು ಆಯ್ಕೆಗಳಲ್ಲಿ ಸೂಕ್ತ ಉತ್ತರವನ್ನು ಆರಿಸಿ ಬರೆಯಿರಿ**

೧. ರಾಧಾಕೃಷ್ಣನ್ ಅವರ ಸಾಧನೆಯಲ್ಲಿ ವಿಶೇಷ ಸಹಕಾರ ನೀಡಿದವರು ________
[ತಂದೆ ತಾಯಿ ಪತ್ನಿ ಸಹೋದರಿ]

೨. ಮದ್ರಾಸಿನ ಕ್ರಿಶ್ಚಿಯನ್ ಶಾಲೆಯಲ್ಲಿ ರಾಧಾಕೃಷ್ಣನ್ ಅವರು ಉತ್ತಮ ವಿದ್ಯಾರ್ಥಿ ಎಂದು ಪರಿಗಣಿಸಲ್ಪಟ್ಟ ವಿಷಯ ________
[ಸಮಾಜಶಾಸ್ತ್ರ ರಾಜ್ಯಶಾಸ್ತ್ರ ಧರ್ಮಶಾಸ್ತ್ರ ತತ್ತ್ವಶಾಸ್ತ್ರ]

೩. ರಾಧಾಕೃಷ್ಣನ್ ಅವರು ಸಂದರ್ಶಕ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ ವಿಶ್ವವಿದ್ಯಾನಿಲಯ ________
[ಬನಾರಸ್ ಕೇಂಬ್ರಿಡ್ಜ್ ಆಕ್ಸ್‌ಫರ್ಡ್ ಉಸ್ಮಾನಿಯ]

೪. “ಮಾನವತೆಯೇ ವಿಶ್ವ ಅನುಸರಿಸಬೇಕಾದ ಮಾರ್ಗ” ಎಂದು ರಾಧಾಕೃಷ್ಣನ್ ಅವರು ರೇಡಿಯೋ ಪ್ರಸಾರ ಭಾಷಣ ಮಾಡಿದ ದೇಶ ______________

[ಇಂಗ್ಲೆಂಡ್ ಕೆನಡಾ ಅಮೆರಿಕ ರಷ್ಯಾ]

೫. ಭಾರತ ಮತ್ತು ರಷ್ಯಾದ ಬಾಂಧವ್ಯವನ್ನು ವೃದ್ಧಿಗೊಳಿಸಿದ ರಾಧಾಕೃಷ್ಣನ್ ಅವರನ್ನು ಪ್ರಶಂಸಿಸಿದವರು ______________

[ಮಹಾತ್ಮಗಾಂಧೀಜಿ ಜವಾಹರಲಾಲ್‌ನೆಹರು ಸ್ಟಾಲಿನ್ ಸಿ.ಇ.ಎಂ. ಜೋಡ್]

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ/ಉತ್ತರ ವಿವರಣಾತ್ಮಕ ಪ್ರಶ್ನೆಗಳು**

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು/ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ**

೧. ಸ್ಟಾಲಿನ್ ಅವರು ರಾಧಾಕೃಷ್ಣನ್ ಅವರ ಬೀಳ್ಕೊಡುಗೆ ಸಮಾರಂಭದಲ್ಲಿ ಏನು ಹೇಳಿದರು?

೨. ರಾಧಾಕೃಷ್ಣನ್ ಅವರ ವಿದ್ಯಾಭ್ಯಾಸ ಎಲ್ಲೆಲ್ಲಿ ನಡೆಯಿತು?

೩. ರಾಧಾಕೃಷ್ಣನ್ ಅವರ ವೇಷಭೂಷಣಗಳ ಬಗ್ಗೆ ಬರೆಯಿರಿ.

೪. ಶಿಕ್ಷಣದ ಮಹತ್ವವನ್ನು ಕುರಿತು ರಾಧಾಕೃಷ್ಣನ್ ಅವರು ಏನು ಹೇಳಿದ್ದಾರೆ?

೫. ರಾಧಾಕೃಷ್ಣನ್ ಅವರಿಗೆ ಸಂದ ಪ್ರಶಸ್ತಿ ಪುರಸ್ಕಾರಗಳು ಯಾವುವು?

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ರಾಧಾಕೃಷ್ಣನ್ ಅವರು ಅಧ್ಯಾಪಕರಾಗಿ ಸಲ್ಲಿಸಿದ ಸೇವೆಯನ್ನು ಕುರಿತು ವಿವರಿಸಿ.

೨. ರಾಧಾಕೃಷ್ಣನ್ ಅವರಿಗೆ ಮೈಸೂರಿನಲ್ಲಿ ನೀಡಿದ ಬೀಳ್ಕೊಡುಗೆಯ ವಿಶೇಷತೆಯನ್ನು ಕುರಿತು ವಿವರಿಸಿ.

೩. ಹಿಂದೂ ಧರ್ಮ ಮತ್ತು ತತ್ವಶಾಸ್ತ್ರದ ಬಗ್ಗೆ ರಾಧಾಕೃಷ್ಣನ್ ಅಭಿಪ್ರಾಯವೇನು? ವಿವರಿಸಿ.

**ಇ. ಕೊಟ್ಟಿರುವ ವಾಕ್ಯಗಳ ಸಂದರ್ಭಸಹಿತ ಸ್ವಾರಸ್ಯವನ್ನು ಬರೆಯಿರಿ**

೧. “ನೀವೊಬ್ಬರೇ ನನ್ನನ್ನು ಒಬ್ಬ ಮನುಷ್ಯನಂತೆ ಕಂಡು ವರ್ತಿಸಿದವರು”.

೨. “ಆರ್ಥಿಕ ಪರಿಸ್ಥಿತಿ ತಮ್ಮ ಸಾಧನೆಯಲ್ಲಿ ನಿವಾರಿಸಲಾಗದ ತೊಡಕೆಂದು ಭಾವಿಸಲಿಲ್ಲ”

೩. “ಏರು ಜವ್ವನದ ಯುವಕರಂತೆ ಹಾಸ್ಯ ವಿನೋದಗಳಲ್ಲಿ ತೊಡಗುತ್ತಿದ್ದರು”

೪, “ಅಶೋಕನು ಕಳಿಂಗ ಯುದ್ಧದ ಅನಂತರ ಶ್ರೇಷ್ಠ ಮನುಷ್ಯನಾದಂತೆ ನೀವೂ ಆಗುವಿರಿ”

೫. “ಮಾನವತೆಯೇ ವಿಶ್ವ ಅನುಸರಿಸಬೇಕಾದ ಮಾರ್ಗ”

**ಈ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ರಾಧಾಕೃಷ್ಣನ್ ಅವರ ತಂದೆತಾಯಿಯರ ಹೆಸರೇನು?

೨. ರಾಧಾಕೃಷ್ಣನ್ ಅವರ ತಂದೆಯ ಅಪೇಕ್ಷೆ ಏನಾಗಿತ್ತು?

೩. ರಾಷ್ಟ್ರಪತಿಗಳಾಗಿ ಪಡೆಯುತ್ತಿದ್ದ ವೇತನವನ್ನು ರಾಧಾಕೃಷ್ಣನ್ ಅವರು ಹೇಗೆ ಸದುಪಯೋಗಪಡಿಸಿಕೊಂಡರು?

೪. ರಾಧಾಕೃಷ್ಣನ್ ಅವರ ಜನ್ಮ ದಿನವನ್ನು ಯಾವ ಹೆಸರಿನಿಂದ ಆಚರಿಸಲಾಗುತ್ತಿದೆ?

## ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**
- **ಕಾಲಗಳು :**

ನಮೂದಿತ ವಾಕ್ಯಗಳನ್ನು ಗಮನಿಸಿ:

**– ಅವನು ಶಾಲೆಗೆ ಹೋಗುತ್ತಾನೆ**

**– ಅವನು ಶಾಲೆಗೆ ಹೋದನು**

**– ಅವನು ಶಾಲೆಗೆ ಹೋಗುವನು**

ಮೂರೂ ವಾಕ್ಯಗಳಲ್ಲಿ **ಹೋಗು** ಎಂಬ ಪದ **ಧಾತು**ವಾಗಿದ್ದು ಇದರ ಜತೆಗೆ ಮೊದಲ ವಾಕ್ಯದಲ್ಲಿ **–ಉತ್ತ** ಎರಡನೆಯ ವಾಕ್ಯದಲ್ಲಿ **–ದ** ಹಾಗೂ ಮೂರನೆಯ ವಾಕ್ಯದಲ್ಲಿ **–ವ** ಎಂಬ ಪ್ರತ್ಯಯ ಇರುವುದನ್ನು ಗಮನಿಸಬಹುದು. ಇವುಗಳಲ್ಲಿ **–ಉತ್ತ** ಎಂಬುದು **ವರ್ತಮಾನಕಾಲ**ವನ್ನೂ **–ದ** ಎಂಬುದು **ಭೂತಕಾಲ**ವನ್ನೂ **–ವ** ಎಂಬುದು **ಭವಿಷ್ಯತ್ ಕಾಲ**ವನ್ನೂ ಸೂಚಿಸುವ ಪ್ರತ್ಯಯಗಳಾಗಿರುವುದರಿಂದ ಮೊದಲ ವಾಕ್ಯ **ವರ್ತಮಾನಕಾಲ**ದಲ್ಲೂ ಎರಡನೆಯ ವಾಕ್ಯ **ಭೂತಕಾಲ**ದಲ್ಲೂ ಮೂರನೆಯ ವಾಕ್ಯ **ಭವಿಷ್ಯತ್‌ಕಾಲ**ದಲ್ಲೂ ಇವೆ ಎಂದು ತಿಳಿಯಬೇಕು. ಧಾತುಗಳಿಗೆ ಕಾಲಸೂಚಕ ಪ್ರತ್ಯಯ ಸೇರುವುದರ ಜತೆಗೆ **–ಅನೆ –ಅನು –ಉದು –ಎನು** ಇತ್ಯಾದಿ **ಆಖ್ಯಾತಪ್ರತ್ಯಯ**ಗಳು ಸೇರುತ್ತವೆ. ಈ ಪ್ರತ್ಯಯಗಳು **ಪುರುಷಾರ್ಥಕ ಸರ್ವನಾಮ, ಲಿಂಗ ಮತ್ತು ವಚನ**ಗಳಿಗನುಗುಣವಾಗಿ ಬೇರೆಬೇರೆ ಆಗಿರುವುದನ್ನು **ತಿನ್ನು** ಎಂಬ ಧಾತುವಿನ ಆಧಾರದಿಂದ ಗಮನಿಸಬಹುದು.



### ವರ್ತಮಾನಕಾಲ

| ಪುರುಷವಾಚಕ | ಲಿಂಗ | ಧಾತು | ಕಾಲಸೂಚಕ ಪ್ರತ್ಯಯ | ಆಖ್ಯಾತಪ್ರತ್ಯಯ ಏಕ/ಬಹು | ಏಕವಚನ | ಬಹುವಚನ |
|---|---|---|---|---|---|---|
| ಉತ್ತಮ ಪುರುಷ | ಪು/ಸ್ತ್ರೀ | ತಿನ್ನು | –ಉತ್ತ | –ಏನೆ/ಏವೆ | ತಿನ್ನುತ್ತೇನೆ | ತಿನ್ನುತ್ತೇವೆ |
| ಮಧ್ಯಮ ಪುರುಷ | ಪು/ಸ್ತ್ರೀ | ತಿನ್ನು | –ಉತ್ತ | –ಇ/ಈರಿ | ತಿನ್ನುತ್ತಿ | ತಿನ್ನುತ್ತೀರಿ |
| ಪ್ರಥಮ ಪುರುಷ | ಪುಲ್ಲಿಂಗ | ತಿನ್ನು | –ಉತ್ತ | –ಆನೆ/ಆರೆ | ತಿನ್ನುತ್ತಾನೆ | ತಿನ್ನುತ್ತಾರೆ |
| ಪ್ರಥಮ ಪುರುಷ | ಸ್ತ್ರೀಲಿಂಗ | ತಿನ್ನು | –ಉತ್ತ | –ಆಳೆ/ಆರೆ | ತಿನ್ನುತ್ತಾಳೆ | ತಿನ್ನುತ್ತಾರೆ |
| ಪ್ರಥಮ ಪುರುಷ | ನಪುಂಸಕ ಲಿಂಗ | ತಿನ್ನು | –ಉತ್ತ | –ಅದೆ/ಅವೆ | ತಿನ್ನುತ್ತದೆ | ತಿನ್ನುತ್ತವೆ |

## ಭೂತಕಾಲ

| ಪುರುಷವಾಚಕ | ಲಿಂಗ | ಧಾತು | ಕಾಲಸೂಚಕ ಪ್ರತ್ಯಯ | ಆಖ್ಯಾತ ಪ್ರತ್ಯಯ ಏಕ/ಬಹು | ಏಕವಚನ | ಬಹುವಚನ |
|---|---|---|---|---|---|---|
| **ಉತ್ತಮ ಪುರುಷ** | ಪು/ಸ್ತ್ರೀ | ತಿನ್ನು | –ದ | –ಎನು/ಎವು | ತಿಂದೆನು | ತಿಂದೆವು |
| **ಮಧ್ಯಮ ಪುರುಷ** | ಪು/ಸ್ತ್ರೀ | ತಿನ್ನು | –ದ | –ಎ/ಇರಿ | ತಿಂದೆ | ತಿಂದಿರಿ |
| **ಪ್ರಥಮ ಪುರುಷ** | ಪುಲ್ಲಿಂಗ | ತಿನ್ನು | –ದ | –ಅನು/ಅರು | ತಿಂದನು | ತಿಂದರು |
| **ಪ್ರಥಮ ಪುರುಷ** | ಸ್ತ್ರೀಲಿಂಗ | ತಿನ್ನು | –ದ | –ಅಳು/ಅರು | ತಿಂದಳು | ತಿಂದರು |
| **ಪ್ರಥಮ ಪುರುಷ** | ನಪುಂಸಕ ಲಿಂಗ | ತಿನ್ನು | –ದ | –ಉದು/ಅವು ಇತು | ತಿಂದುದು/ ತಿಂದಿತು | ತಿಂದವು |

## ಭವಿಷತ್‌ಕಾಲ

| ಪುರುಷವಾಚಕ | ಲಿಂಗ | ಧಾತು | ಕಾಲಸೂಚಕ ಪ್ರತ್ಯಯ | ಆಖ್ಯಾತ ಪ್ರತ್ಯಯ ಏಕ/ಬಹು | ಏಕವಚನ | ಬಹುವಚನ |
|---|---|---|---|---|---|---|
| **ಉತ್ತಮ ಪುರುಷ** | ಪು/ಸ್ತ್ರೀ | ತಿನ್ನು | –ವ | –ಎನು/ಎವು | ತಿನ್ನುವೆನು | ತಿನ್ನುವೆವು |
| **ಮಧ್ಯಮ ಪುರುಷ** | ಪು/ಸ್ತ್ರೀ | ತಿನ್ನು | –ವ | –ಎ/ಇರಿ | ತಿನ್ನುವೆ | ತಿನ್ನುವಿರಿ |
| **ಪ್ರಥಮ ಪುರುಷ** | ಪುಲ್ಲಿಂಗ | ತಿನ್ನು | –ವ | –ಅನು/ಅರು | ತಿನ್ನುವನು | ತಿನ್ನುವರು |
| **ಪ್ರಥಮ ಪುರುಷ** | ಸ್ತ್ರೀಲಿಂಗ | ತಿನ್ನು | –ವ | –ಅಳು/ಅರು | ತಿನ್ನುವಳು | ತಿನ್ನುವರು |
| **ಪ್ರಥಮ ಪುರುಷ** | ನಪುಂಸಕ ಲಿಂಗ | ತಿನ್ನು | –ವ | –ಉದು/ಉವು | ತಿನ್ನುವುದು | ತಿನ್ನುವುವು |



## ಕಾಲಪಲ್ಲಟ

ಒಂದು ಕಾಲದ ಕ್ರಿಯೆಯನ್ನು ಇನ್ನೊಂದು ಕಾಲದ ಕ್ರಿಯಾರೂಪದಿಂದ ಹೇಳುವುದೇ **ಕಾಲಪಲ್ಲಟ.** ಹೀಗೆ ಕಾಲಪಲ್ಲಟವಾಗುವಾಗ ಭವಿಷ್ಯತ್ ಕಾಲದ ಕ್ರಿಯಾಪದಗಳು ವರ್ತಮಾನ ಕಾಲದಲ್ಲೂ ವರ್ತಮಾನದ ಕಾಲದ ಕ್ರಿಯಾಪದಗಳು ಭವಿಷ್ಯತ್ ಕಾಲದಲ್ಲೂ ಪ್ರಯೋಗವಾಗುವುವು.

ಉದಾ.: ೧. ವರ್ತಮಾನಕಾಲವು ಭವಿಷ್ಯತ್‌ಕಾಲದಲ್ಲಿ

– **ಅವನು ಒಳಗೆ ಊಟ ಮಾಡುವನು** (ಊಟ ಮಾಡುತ್ತಾನೆ ಎಂದಾಗಬೇಕು)

– **ಅವಳು ಒಳಗೆ ಅಡುಗೆ ಮಾಡುವಳು** (ಅಡುಗೆ ಮಾಡುತ್ತಾಳೆ ಎಂದಾಗಬೇಕು)

ಉದಾ.: ೨.    ಭವಿಷ್ಯತ್‌ಕಾಲವು ವರ್ತಮಾನಕಾಲದಲ್ಲಿ

– **ಅವನು ನಾಳೆ ಹೋಗುತ್ತಾನೆ** (ಹೋಗುವವನು ಎಂದಾಗಬೇಕು)

– **ನಾನು ಮುಂದಿನ ತಿಂಗಳು ಬರುತ್ತೇನೆ** (ಬರುವೆನು ಎಂದಾಗಬೇಕು)

## ಭಾಷಾ ಚಟುವಟಿಕೆ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ**

೧. ಕಾಲಗಳು ಎಷ್ಟು? ಉದಾಹರಣೆ ಸಹಿತ ವಿವರಿಸಿ.

೨. ಕಾಲಸೂಚಕ ಪ್ರತ್ಯಯಗಳನ್ನು ಪಟ್ಟಿ ಮಾಡಿರಿ.

೩. ಕಾಲಪಲ್ಲಟ ಎಂದರೇನು?

೪. ಆಖ್ಯಾತ ಪ್ರತ್ಯಯಕ್ಕೆ ಐದು ನಿದರ್ಶನ ಕೊಡಿ.

## ಪೂರಕ ಓದು

- **ಕೆ. ಎಸ್. ರತ್ನಮ್ಮ** ಅವರ **ಎಸ್. ರಾಧಾಕೃಷ್ಣನ್ ಜೀವನ ಸಾಧನೆ** ಪುಸ್ತಕವನ್ನು ಓದಿ
- **ಎ.ಎನ್. ಮೂರ್ತಿರಾವ್** ಅವರ **ಚಿತ್ರಗಳು – ಪತ್ರಗಳು** ಪುಸ್ತಕವನ್ನು ಓದಿ.





# ಗದ್ಯಪಾಠ – ೦೫

# ಸಮಾಗಮ

[ಅನುವಾದಿತ ನಾಟಕ]

–ಮೂಲ: ಭಾಸ, ಕನ್ನಡಕ್ಕೆ: ಸಂಪನ್ಮೂಲ ಸಂಪಾದನೆ – ಸಂಗ್ರಹ

## ಮುನ್ನುಯಾರಿ

ಕಾವ್ಯೇಷು ನಾಟಕಂ ರಮ್ಯಂ ಎಂಬದು ಸಂಸ್ಕೃತದಲ್ಲಿ ಜನಪ್ರಿಯ ಮಾತು. ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ನಾಟಕ ಮೊದಲು ರಚನೆಯಾದದ್ದು ಸಂಸ್ಕೃತ ಸಾಹಿತ್ಯದಲ್ಲಿ ಆದರೂ ಕನ್ನಡ ನಾಟಕ ಚರಿತ್ರೆಯನ್ನು ಗಮನಿಸಿದಾಗ ಯಕ್ಷಗಾನದ ಪ್ರಸಂಗಗಳನ್ನು ಮೊದಲ ನಾಟಕವೆಂದು ಭಾವಿಸಲಾಗಿದೆ. ನಾಟಕ ಪ್ರಕಾರದಲ್ಲಿ ಸೃಜನಾತ್ಮಕ ಹಾಗೂ ಅನುವಾದಿತ ನಾಟಕಗಳೆಂದು ಎರಡು ಬಗೆ. ಅನುವಾದ ಕ್ಷೇತ್ರಕ್ಕೆ ಸಂಸ್ಕೃತ, ಇಂಗ್ಲಿಷ್ ಭಾಷೆಗಳ ಕೊಡುಗೆ ಅಪಾರ. ಪ್ರಕೃತ ಅನುವಾದ ನಾಟಕವನ್ನು ಪ್ರಾತಿನಿಧಿಕವಾಗಿ ಪರಿಚಯಿಸಲಾಗುತ್ತಿದೆ.

## ಅರ್ಥೈಸಿ–ಓದಿ

| | | | | |
|---|---|---|---|---|
| ನೈದಿಲೆ | ವ್ಯೋಮ | ವೈಢೂರ್ಯ | ವಿಜ್ಞಾಪನೆ | ಕಗ್ಗಾಡು |
| ಬೇಳ್ವೆ | ದೀಪ್ತ | ಅಭವ | ಶತಕುಂಭ | ಮಹರ್ಷಿ |
| ಪಾರಣೆ | ನಿಷಿದ್ಧ | ತಾರಕಸ್ವರ | ಪಂಚಭೂತ | |



## ಪಾತ್ರ ಪರಿಚಯ

**ಸೂತ್ರಧಾರ** : ನಾಟಕದ ಕತೆಯ ನಿರೂಪಕ, ರಂಗದ ತಾಂತ್ರಿಕ

**ವಯಸ್ಸಿಗ** : ಕುಟುಂಬದ ಹಿರಿಯ ಯಜಮಾನ

**ಹೆಂಡತಿ** : ವಯಸ್ಸಿಗನ ಮಡದಿ

**ಹಿರಿಮಗ** : ವಯಸ್ಸಿಗನ ಹಿರಿಯ ಮಗ

**ನಡುಮಗ** : ವಯಸ್ಸಿಗನ ಮಧ್ಯದ ಮಗ

**ಕಿರಿಮಗ** : ವಯಸ್ಸಿಗನ ಕೊನೆಯ ಮಗ

**ಘಟೋತ್ಕಚ** : ಪಾಂಡವ ಮಧ್ಯಮನ (ಭೀಮನ) ಮಗ

**ಹಿಡಿಂಬೆ** : ಭೀಮನ ಮಡದಿ, ಘಟೋತ್ಕಚನ ತಾಯಿ

## ನಿಗದಿತ ಮೂಲ ಅನುವಾದಿತ ನಾಟಕ – ಗದ್ಯ

**ಸೂತ್ರಧಾರ** : **ನೈದಿಲೆಯ ದಳದಂತೆ ನೀಲವರ್ಣದ ಪಾದ । ಮೂರು ಲೋಕವನ್ನಳೆಯುವಾಗ । ವ್ಯೋಮ ಸಾಗರದಾದ್ಯಂತ ವೈಢೂರ್ಯ ಸೇತುವೆಯ ನಿರ್ಮಿಸಿದ ಪಾದ । ಶ್ರೀಹರಿಯ ಆ ರಂಜಿಸುವ ಪಾದ । ಸದಾ ನಿಮ್ಮನ್ನು ಪಾಲಿಸುತ್ತಿರಲಿ.** ಮಹಾಜನಗಳಲ್ಲಿ ವಿಜ್ಞಾಪನೆ......

**ಧ್ವನಿ (ವಯಸ್ಸಿಗ)** : ಅಯ್ಯೋ ದೇವರೆ! ಇವನು ಯಾರೋ ಕಾಣೆನಲ್ಲ!.

**ಸೂತ್ರಧಾರ** : (ತುಸು ಕಸಿವಿಸಿಯಿಂದ)ಓ, ವಿಜ್ಞಾಪಿಸಿಕೋಬೇಕು ಅಂತ ಇರೋವಷ್ಟರಲ್ಲಿ ಅಲ್ಲಿ ಯಾರೋ ಕೂಗುತ್ತ ಗದ್ದಲ ಮಾಡುತ್ತಿದ್ದಾರೆ. ಅದೇನು ನೋಡುತೀನಿ.

**ಧ್ವನಿ (ವಯಸ್ಸಿಗ)** : ಅಯ್ಯೋ ದೇವರೆ! ಇವನು ಯಾರೋ ಕಾಣೆನಲ್ಲ!.

**ಸೂತ್ರಧಾರ** : ನಿಜವಾಗ್ಲೂ ಈತ ಬ್ರಾಹ್ಮಣನೇ ಇರಬೇಕು. ಅದರಲ್ಲೇನೂ ಸಂಶಯವಿಲ್ಲ (ರಂಗದ ಬದಿಗೆ ಹೋಗಿ ಹೊರಗೆ ನೋಡಿ, ಪುನಾ ತನ್ನ ಪೂರ್ವ ಸ್ಥಾನಕ್ಕೆ ಬಂದು). ಓ...... ಈಗ ಗೊತ್ತಾಯಿತು. ಹೆದರಿಸ್ತಿರೋನು, ಪಾಂಡವಮಧ್ಯಮ, ಭೀಮಸೇನನ ಮಗ. ಹಿಡಿಂಬೆಯಲ್ಲಿ ಜನಿಸಿದವನು. ಸಾತ್ವಿಕನೊಬ್ಬನನ್ನು ಅಟ್ಟಿಸಿಕೊಂಡು ಬರ್ತಿದ್ದಾನೆ! ಬಳಲಿರುವ ಹೆಂಡತಿ ಮಕ್ಕಳು ಬೇರೆ! ಪಾಪ, ಅವನಿಗೆ ಏನು ಪಾಡು ಬಂತು! (ಹೊರಕ್ಕೆ ಹೋಗುತ್ತಾನೆ).

[ತೆರೆ ಏಳುತ್ತದೆ; ದೃಶ್ಯ ಕಗ್ಗಾಡಿನಲ್ಲಿ ಒಂದು ಕಾಲುದಾರಿ. ವಯಸ್ಸಿಗನ ಹೆಂಡತಿ ಆಕೆಯ ಕೈ ಹಿಡಿದುಕೊಂಡು ಕಿರಿಮಗ. ಅವರ ಹಿಂದೆ ಎರಡನೆಯ ಮಗ ಮತ್ತು ಹಿರಿಯ ಮಗ, ಕಡೆಯಲ್ಲಿ ವಯಸ್ಸಿಗ ಅವಸರದಲ್ಲಿ ಪ್ರವೇಶಿಸುತ್ತಾರೆ.]



**ವಯಸ್ಸಿಗ** : ಅಯ್ಯೋ ದೇವರೆ ಇವನಾರೋ ಕಾಣೆನಲ್ಲ!

**ಹಿರಿಮಗ** : ಕರಿಯ ಮೋಡದ ಹಾಗೆ ಬರುತ್ತಿದ್ದಾನೆ.

**ನಡುಮಗ** : ಅಪ್ಪ ಅವನು ಯಾರು?

ಆನೆ ಮರಿಯ ದಂತದಂಥ ದಾಡೆಯವನು ನೇಗಿಲಂಥ ಮೂಗಿನವನು
ಮದಿಸಿದಾನೆ ಸುಂಡಿಲಂಥ ತೋಳಿನವನು ಕರಿಯ ಮುಗಿಲ ಬಣ್ಣದವನು
ಬೇಳ್ವೆಯುಂಡ ಅಗ್ನಿವೋಲು ದೀಪ್ತನಿವನು ಭೀಕರೋಗ್ರ ಭೀಮನು
ತ್ರಿಪುರದಾಹದಂದಿನಭವ ರೋಷ ಮೂರ್ತಿವೆತ್ತ ತೆರದೊಳಿರ್ಪನು.

**ಧ್ವನಿ (ವಯಸ್ಸಿಗ)** : (ಹೊರಗಿನಿಂದ) ಅಯ್ಯಾ ನಿಲ್ಲು!.

**ಹಿರಿಮಗ** : ಅಪ್ಪ ಅವನು ಯಾರಪ್ಪ ನಮ್ಮನ್ನು ಪೀಡಿಸುತ್ತಿರುವವನು?.

**ಹೆಂಡತಿ** : ನಮಗೆ ಯಾಕೆ ಹೀಗೆ ಹಿಂಸೆ ಕೊಡುತ್ತಿದ್ದಾನೆ?.

ಘಟೋತ್ಕಚ : (ಪ್ರವೇಶಿಸಿ)ಅಯ್ಯಾ ನಿಲ್ಲು! ನಿಲ್ಲು! ನನಗೆ ಭಯಪಟ್ಟು ಏಕೆ ಓಡುತ್ತಿ? ಬಲವಿಲ್ಲದೋನು ನೀನು, ಹೆಂಡತಿ ಮಕ್ಕಳನ್ನು ರಕ್ಷಿಸುವ ಶಕ್ತಿಯಿಲ್ಲ. ಎಲ್ಲಿ ಹೋಗುತ್ತಿ? ನಿಲ್ಲು!

ವಯಸ್ಸಿಗ : (ಹೆಂಡತಿಗೆ) ಹೆದರಬೇಡ. ಹೆದರಬೇಡಿ ಮಕ್ಕಳೆ, ಅವನ ಮಾತಿನಲ್ಲಿ ತರ್ಕ ಇದೆ. ಯೋಚಿಸಿ ಮಾತಾಡ್ತಿದ್ದಾನೆ.

ಘಟೋತ್ಕಚ : ನಾನೆಂತಹ ಇಕ್ಕಟ್ಟಿನಲ್ಲಿ ಸಿಕ್ಕಿದ್ದೇನೆ ನಿಮಗೆ ಗೊತ್ತಿಲ್ಲ. ಎಲ್ಲ ಕಾಲದಲ್ಲಿ ಎಲ್ಲೆಡೆಗಳಲ್ಲಿ ಸಾತ್ವಿಕರು ಪೂಜ್ಯರೆಂದು ಬಲ್ಲೆ. ಆದರಿವತ್ತು ತಾಯಿಯ ಆಜ್ಞೆಯಾಗಿದೆ. ಅವಳು ಹೇಳಿರುವುದನ್ನು ಹಿಂಜರಿಯದೆ ಮಾಡಲೇಬೇಕಾಗಿದೆ.

ವಯಸ್ಸಿಗ : (ಹೆಂಡತಿಗೆ) ಜಲಕ್ಲಿನ್ನಮುನಿಗಳು ಹೇಳಿದ್ದು ಜ್ಞಾಪಕ ಇದೆಯೇ? ಈ ಕಾಡಿನಲ್ಲಿ ರಾಕ್ಷಸರಿದ್ದಾರೆ. ಎಚ್ಚರಿಕೆಯಿಂದ ಹೋಗಬೇಕು ಅಂತ. ಅವರು ಹೇಳಿದ ರಾಕ್ಷಸ ಭಯ ಈಗ ಬಂದಿದೆ.

ಹೆಂಡತಿ : ಹಾಗೆಂದರೆ? ಸುಮ್ಮನೆ ನಿಂತುಬಿಟ್ಟರೆ ಆಗುತ್ತದೆಯೆ?

ವಯಸ್ಸಿಗ : ಅದೃಷ್ಟವಿಲ್ಲದೋನು ಏನು ಮಾಡು ಅನ್ನುತ್ತಿ?

ಹೆಂಡತಿ : ಯಾಕೆ ಕೂಗಿಕೋಬಾರದು?

ಹಿರಿಮಗ : ಯಾರನ್ನ ಅಂತ ಕೂಗುತ್ತೀಯಮ್ಮ? ನಿರ್ಜನವಾದ ಕಾಡು, ಬಿಕೋ ಅನ್ನುವಂತಿದೆ.

ವಯಸ್ಸಿಗ : ಇಲ್ಲೇ ಎಲ್ಲೋ ಹತ್ತಿರದಲ್ಲಿ ಪಾಂಡವರ ಆಶ್ರಮ ಇದ್ದರೂ ಇರಬಹುದು. ಪಾಂಡವರಿಗೆ ಕಾದಾಡೋದು ಇಷ್ಟ. ರಕ್ಷಣೆ ಬೇಡಿದೋರನ್ನ ಸ್ನೇಹಿತರ ಹಾಗೆ ನೋಡಿಕೋತಾರೆ. ಖಂಡಿತವಾಗಿಯೂ ದೀನರ ಪಕ್ಷವಹಿಸಿ ಕಾಪಾಡುತ್ತಾರೆ.

ಹಿರಿಮಗ : ಪಾಂಡವರು ಅಲ್ಲಿರೋದು ಕಾಣಲಿಲ್ಲ ಕಣಪ್ಪ.

ವಯಸ್ಸಿಗ : ನಿನಗೆ ಹ್ಯಾಗೆ ಗೊತ್ತು?

ಹಿರಿಮಗ : ದಾರೀಲೊಬ್ಬ ವಿಪ್ರ ಸಿಕ್ಕಿದನಲ್ಲ ಅವನು ಹೇಳಿದ. ಅವರು ಶತಕುಂಭಯಜ್ಞದಲ್ಲಿ ಭಾಗವಹಿಸುವ ಸಲುವಾಗಿ ಧೌಮ್ಯಮಹರ್ಷಿಯ ಆಶ್ರಮಕ್ಕೆ ಹೋಗಿದ್ದಾರಂತೆ.

ವಯಸ್ಸಿಗ : ಹಾಗಿದ್ದರೆ ನಾವು ಸತ್ತ ಹಾಗೆ ಸರಿ.

ಹಿರಿಮಗ : ಅಪ್ಪ ಎಲ್ಲರೂ ಹೋಗಿಲ್ಲವಂತೆ ಆಶ್ರಮದ ಕಾವಲಿಗೆ ಅಂತ ಮಧ್ಯಮನನ್ನು ಬಿಟ್ಟಿದ್ದಾರಂತೆ.

ವಯಸ್ಸಿಗ : ಸಧ್ಯ! ಅವನೊಬ್ಬ ಇದ್ದರೆ ಸಾಕು ಎಲ್ಲರೂ ಇದ್ದ ಹಾಗೆ.

ಹಿರಿಮಗ : ಆದರೆ ಇಷ್ಟು ಹೊತ್ತಿನಲ್ಲಿ ಕಸರತ್ತು ಮಾಡೋಕೆ ಎಲ್ಲೋ ದೂರ ಹೋಗಿರುತ್ತಾನಂತೆ.

ವಯಸ್ಸಿಗ : (ನಿಟ್ಟುಸಿರುಬಿಟ್ಟು) ಹೂಂ! ನಮ್ಮ ಆಸೆ ಮುಗೀತು!..... ಅವನನ್ನೇ ಸ್ವಲ್ಪ ಕೇಳಿಕೋತೇನೆ..... ಅಯ್ಯಾ ಅಯ್ಯಾ ನೀನು ಗಟ್ಟಿ ಗಂಡಸು. ನಮ್ಮನ್ನ ಬಿಟ್ಟು ಬಿಡುತೀಯಾ?

| | | |
|---|---|---|
| **ಘಟೋತ್ಕಚ** | : | (ಎರಡು ಕ್ಷಣ ವಯಸ್ಸಿಗನನ್ನು ದಿಟ್ಟಿಸಿ, ತರುವಾಯ) ಬಿಡುತ್ತೇನೆ. ಒಂದು ಷರತ್ತಿಗೆ ಒಪ್ಪಿದರೆ. |
| **ವಯಸ್ಸಿಗ** | : | ಏನು ಷರತ್ತು? |
| **ಘಟೋತ್ಕಚ** | : | ಅಲ್ಲಿ ನನ್ನ ತಾಯಿ ಇದ್ದಾಳೆ. ಆಕೆ ನನಗೆ ಹೇಳಿದ್ದಾಳೆ "ನನ್ನ ಉಪವಾಸ ಮುಗೀತು. ಇವತ್ತು ಪಾರಣೆ, ಈ ಕಾಡಿನಲ್ಲಿ ಹುಡುಕಿ ಯಾವನಾದರೂ ಒಬ್ಬ ಮನುಷ್ಯನನ್ನು ಹಿಡಿದುಕೊಂಡು ಬಾ" ಅಂದಿದ್ದಾಳೆ. ಆದ್ದರಿಂದ ನಿಮ್ಮನ್ನ ಹಿಡಿದುಕೊಂಡೆ. ನಿನ್ನ ಹೆಂಡತಿ, ಇಬ್ಬರು ಮಕ್ಕಳ ಸಮೇತ ನೀನು ಬಿಡುಗಡೆ ಪಡೆಯಬೇಕಾದರೆ, ಒಬ್ಬ ಮಗನನ್ನ ನನಗೆ ಕೊಡು. |
| **ವಯಸ್ಸಿಗ** | : | ಹಾಗಿದ್ದರೆ ನನ್ನ ತೀರ್ಮಾನ ಕೇಳು. ಹೆಂಡತಿ ಮಕ್ಕಳ ರಕ್ಷಣೆಗಾಗಿ ನಾನೇ ಬರುತ್ತೇನೆ. |
| **ಹೆಂಡತಿ** | : | ಬೇಡಿ! ಹಾಗೆ ಮಾಡಬೇಡಿ! ನನ್ನ ದೇಹವನ್ನರ್ಪಿಸಿ ಗಂಡನನ್ನು ಮಕ್ಕಳನ್ನು ಕುಲವನ್ನು ಉಳಿಸಿ ಉದ್ಧಾರವಾಗುತ್ತೇನೆ. |
| **ಘಟೋತ್ಕಚ** | : | ತಾಯಿ, ನನ್ನ ತಾಯಿಗೆ ಹೆಂಗಸರು ಇಷ್ಟವಿಲ್ಲ.......... |
| **ಹಿರಿಮಗ** | : | ಕುಲದ ರಕ್ಷಣೆಗಾಗಿ ನನ್ನನ್ನು ಇವನೊಡನೆ ಕಳುಹಿಸಿಕೊಡಿ............ |
| **ನಡುಮಗ** | : | ಅಣ್ಣ, ನಾನು ಒಪ್ಪೋದಿಲ್ಲ. ನೀನು ಜ್ಯೇಷ್ಠ. ಪಿತೃಗಳಿಗೆ ಪ್ರಿಯನಾದವ. ಲೋಕಕ್ಕೆ ಜ್ಯೇಷ್ಠನೇ ಶ್ರೇಷ್ಠ. ಆದ್ದರಿಂದ ನಾನು ಹೋಗುತ್ತೇನೆ. |
| **ಕಿರಿಮಗ** | : | ದೊಡ್ಡಣ್ಣ, ಚಿಕ್ಕಣ್ಣ ನೀವು ಹೋಗೋಕೆ ನಾನು ಬಿಡೋದಿಲ್ಲ. ಹಿರಿಯಣ್ಣ ತಂದೆಗೆ ಸಮಾನ ಎಂದು ತತ್ತ್ವ ತಿಳಿದವರು ಹೇಳುತ್ತಾರೆ. ಹಿರಿಯರನ್ನು ಉಳಿಸಲು ನಾನೇ ತಕ್ಕವನು. |
| **ಹಿರಿಮಗ** | : | ತಮ್ಮಯ್ಯ ಹಾಗಲ್ಲ. ತಂದೆಗಾಪತ್ತು ಬಂದಾಗ ಅದ ನಿವಾರಿಸುವುದು ಹಿರಿಯ ಮಗನ ಧರ್ಮ. ದೊಡ್ಡವರನ್ನು ಉಳಿಸುವುದಕ್ಕೆ ನಾನು ಹೋಗುತ್ತೇನೆ. |
| **ವಯಸ್ಸಿಗ** | : | ನೀನು ಹಿರಿಯ ಮಗ. ನಿನ್ನನ್ನು ಬಿಟ್ಟು ಕೊಡೋದಿಲ್ಲ. |
| **ಹೆಂಡತಿ** | : | (ಕಿರಿಯ ಮಗನನ್ನು ಸೆಳೆದುಕೊಂಡು) ಅವರಿಗೆ ಹಿರಿಯ ಮಗನ ಮೇಲೆ ಇಷ್ಟ ಇರೋ ಹಾಗೆ ನನಗೆ ಕಿರಿಯ ಮಗನ ಮೇಲೆ ಇಷ್ಟ. |
| **ನಡುಮಗ** | : | ಕುಟುಂಬದ ಗೌರವವನ್ನು ಕಾಪಾಡುವುದು ನನ್ನ ಜವಾಬ್ದಾರಿ ಅಲ್ಲವಾ? ತಂದೆ ತಾಯಿಯರಿಗೆ ಬೇಡವಾದೋನು ನಾನು ಯಾರಿಗೆ ಬೇಕಾಗುತ್ತೇನೆ? |
| **ಘಟೋತ್ಕಚ** | : | ನನಗೆ ಬೇಕಾಗುತ್ತೀಯ. ಬಾ, ಬೇಗ ಹೋಗಬೇಕು. |
| **ನಡುಮಗ** | : | ದೊಡ್ಡವರ ಪ್ರಾಣವನ್ನು ರಕ್ಷಿಸುವ ನಾನು ಪುಣ್ಯವಂತ. |
| **ಘಟೋತ್ಕಚ** | : | ಅಬ್ಬ! ಈ ವಟುವಿಗೆ ಸ್ವಜನ ವಾತ್ಸಲ್ಯ ಎಷ್ಟಿದೆ!. |

ನಡುಮಗ : **(ವಯಸ್ಸಿಗನಿಗೆ)** ಅಪ್ಪ, ನಮಸ್ಕಾರ ಮಾಡುತ್ತೇನೆ (ಕಾಲು ಮುಟ್ಟಿ ನಮಸ್ಕರಿಸುತ್ತಾನೆ).

ವಯಸ್ಸಿಗ : (ಅವನನ್ನು ಹಿಡಿದೆಬ್ಬಿಸಿ) ಹಿರಿಯರ ಪ್ರಾಣಕ್ಕೆ ಬದಲಾಗಿ ತನ್ನ ಪ್ರಾಣವನ್ನೇ ಕೊಡುವ ನಿನಗೆ ಬ್ರಹ್ಮಲೋಕ ದೊರೆಯಲಿ.

**(ನಡುಮಗ ತನ್ನ ತಾಯಿ, ಅಣ್ಣನಿಗೆ ನಮಸ್ಕರಿಸುತ್ತಾನೆ. ಅಲ್ಲದೆ ನಮಸ್ಕರಿಸಿದ ಕಿರಿಯನನ್ನು ಆಶೀರ್ವದಿಸುತ್ತಾನೆ)**

ನಡುಮಗ : (ಘಟೋತ್ಕಚನ ಬಳಿಗೆ ಬಂದು) ಅಯ್ಯಾ ವೀರ, ಹತ್ತಿರದಲ್ಲೇ ನದಿ ಇರೋ ಹಾಗೆ ಕಾಣುತ್ತೆ. ಮಿಂದುಟ್ಟು ಬರುತ್ತೇನೆ.

ಘಟೋತ್ಕಚ : (ಯೋಚಿಸುತ್ತ) ಆಂ? ನೀನು ಗಟ್ಟಿ ಮನಸ್ಸಿನೋನು ಹೋಗು. ಆದರೆ ಬೇಗ ಬರಬೇಕು ತಿಳೀತೇ?

ನಡುಮಗ : **(ವಯಸ್ಸಿಗನಿಗೆ)** ಅಪ್ಪ ಹೋಗಿ ಬರುತ್ತೇನೆ (ಹೊರಕ್ಕೆ ಹೋಗುತ್ತಾನೆ).

ವಯಸ್ಸಿಗ : ಹಾ! ಹಾ! ಕಳೆದುಕೊಂಡೆವಲ್ಲ ಕಳೆದುಕೊಂಡೆವಲ್ಲ.

ತರುಣತಾನುರೂಪಕಾಂತಿಯಿಂದ ಮೆರೆವ ತರುಣನೆ । ನಿಯಮಪರನೆ ಪಾಠಾಸಕ್ತಚಿತ್ತನೆ ಆನೆ ಮುರಿಯೆ
ನೆಲಕುರುಳ್ದ ಹೂವು ಬಿಟ್ಟ ಮರವೆನೆ । ಅಯ್ಯೋ ನಾಶವಡೆಯೆ ನೀನದೆಂತು ಪೋಪೆ ಬಾಲನೆ.

ಘಟೋತ್ಕಚ : ಯಾಕೆ ಆ ವಟು ಇಷ್ಟು ತಡಮಾಡುತ್ತಿದ್ದಾನೆ? ಅಮ್ಮನ ಪಾರಣೆಯ ಹೊತ್ತು ಮೀರುತ್ತಾ ಬಂತು, ಏನು ಮಾಡಲಿ? ಅಯ್ಯಾ ವಿಪ್ರ ನಿನ್ನ ಮಗನನ್ನು ಕೂಗು.

ವಯಸ್ಸಿಗ : ನೀನು ಹೇಳೋದು ರಾಕ್ಷಸರ ಕ್ರೌರ್ಯವನ್ನೂ ಮೀರಿಸುವಂತಿದೆ.

ಘಟೋತ್ಕಚ : ಯಾಕೆ? ಕೋಪ ಬಂತೆ? ಕ್ಷಮಿಸಿ, ಸ್ವಾಮಿ, ಕ್ಷಮಿಸಿ. ಅದು ನನ್ನ ಸ್ವಭಾವದ ದೋಷ. ನೀವು ಕೂಗದಿದ್ದರೆ ಹೋಗಲಿ, ಅವನ ಹೆಸರೇನು?

ವಯಸ್ಸಿಗ : ಅದನ್ನು ಹೇಳೋದೂ ನಿಷಿದ್ಧ.

ಘಟೋತ್ಕಚ : ಸರಿ ಸರಿ ಅಯ್ಯಾ ಹುಡುಗ ನಿನ್ನ ತಮ್ಮನ ಹೆಸರೇನು?

ಹಿರಿಮಗ : ಬಡಪಾಯಿ! 'ಮಧ್ಯಮ' ಅಂತ.

ಘಟೋತ್ಕಚ : ಮಧ್ಯಮ ಅಂತಲೆ? ಚೆನ್ನಾಗಿ ಒಪ್ಪೋ ಹೆಸರು. ಸರಿ, ನಾನೇ ಕರೆಯುತ್ತೇನೆ. ಮಧ್ಯಮಾ....! ಅಯ್ಯಾ ಮಧ್ಯಮಾ....! ಬೇಗ ಬಾ!.

ಭೀಮ : (ಸ್ವಗತ) ಯಾರೋ ಕೂಗಿದ್ದು ಕೇಳಿಸಿತು;ನೂರಾರು ಹಕ್ಕಿಗಳ ಮಧುರನಾದದಿಂದ ತುಂಬಿ, ಹೆಜ್ಜೆಯಿಡಲಾಗದಷ್ಟು ದಟ್ಟವಾಗಿ ಬೆಳೆದ ಮರಗಳು ಹಬ್ಬಿ, ಭಯ ಹುಟ್ಟಿಸುವ ಈ ಕಾಡಿನಲ್ಲಿ ಯಾವನೋ ತಾರಕ ಸ್ವರದಲ್ಲಿ ಕೂಗಿದ!

ಘಟೋತ್ಕಚ : ಇನ್ನೂ ತಡ ಮಾಡುತ್ತಿದ್ದಾನಲ್ಲ! ಅಮ್ಮನ ಪಾರಣೆಯ ಹೊತ್ತು ಇನ್ನೇನು ಮೀರಿ ಹೋಗುತ್ತೆ. ಏನು ಮಾಡಲಿ? ಇನ್ನೂ ಗಟ್ಟಿಯಾಗಿ ಕೂಗುತ್ತೇನೆ. ಮಧ್ಯಮಾ ಬೇಗ ಬಾ!

ಭೀಮ : ಅವನು ಯಾರು? ಈ ಕಾಡಿನಲ್ಲಿ ಮಧ್ಯಮ, ಮಧ್ಯಮ ಅಂತ ಕೂಗಿ ನನ್ನ ವ್ಯಾಯಾಮಕ್ಕೆ ಅಡ್ಡಿ ಮಾಡಿದ. ಅವನು ಯಾರು ನೋಡಬೇಕು. (ಪ್ರವೇಶಿಸಿ, ಘಟೋತ್ಕಚನನ್ನು ಕಂಡು) ಓ! ಈತ ಎಷ್ಟು ಚೆನ್ನಾಗಿದ್ದಾನೆ. ಯಾವನೋ ಲೋಕವೀರನ ಮಗನಂತೆ ಕಾಣುತ್ತಾನೆ.

ಘಟೋತ್ಕಚ : ಅಯ್ಯಾ ವಿಪ್ರ, ನಿಮ್ಮ ಹುಡುಗ ಎಷ್ಟು ತಡ ಮಾಡುತ್ತಿದ್ದಾನೆ. ನೀವಂತೂ ಅವನನ್ನು ಕರೆಯೋದಿಲ್ಲ. ಆಗಲಿ ನಾನೇ ಕರೆಯುತ್ತೇನೆ. ಅಯ್ಯಾ ಮಧ್ಯಮಾ, ಬೇಗ ಬಾ.

ಭೀಮ : ಇದೋ ಬಂದೆ.

ಘಟೋತ್ಕಚ : (ಭೀಮನನ್ನು ದೃಷ್ಟಿಸಿ) ನೀನು ಪಾರ್ವ ಹುಡುಗನಲ್ಲ (ನದಿಯ ಕಡೆ ತಿರುಗಿ). ಏ! ಮಧ್ಯಮಾ ನಿನ್ನನ್ನೇ ಕೂಗುತ್ತಿರೋದು.

ಭೀಮ : ಅದಕ್ಕೇ ನಾನು ಬಂದಿರೋದು.

ಘಟೋತ್ಕಚ : ನೀನೂ ಮಧ್ಯಮನೇ?.

ಭೀಮ : ಬೇರೆ ಮಧ್ಯಮ ಯಾರೂ ಇಲ್ಲ. ಕೊಲ್ಲಲಸಾಧ್ಯವಾದವರಲ್ಲಿ ನಾನೇ ಮಧ್ಯಮ, ಪಂಚಭೂತಗಳಲ್ಲೂ ನಾನೇ ಮಧ್ಯಮ.

ವಯಸ್ಸಿಗ : (ಹೆಂಡತಿಗೆ) ಮಧ್ಯಮ ಅಂತ ಹೇಳಿಕೊಳ್ಳುತ್ತಿರೋ ಅವನು ಖಂಡಿತವಾಗಿಯೂ ಪಾಂಡುವಿನ ಮಧ್ಯಮ ಮಗನೇ ಇರಬೇಕು.

ನಡುಮಗ : (ಘಟೋತ್ಕಚನಿಗೆ) ಅಯ್ಯಾ! ಪುರುಷ ಹಿಂದಿರುಗಿ ಬಂದಿದ್ದೇನೆ.

ಘಟೋತ್ಕಚ : (ಭೀಮನಿಗೆ) ಇವನು ನಿಜವಾದ ಮಧ್ಯಮ.

ವಯಸ್ಸಿಗ : (ಭೀಮನಿಗೆ) ಅಯ್ಯಾ ಮಧ್ಯಮ, ನಮ್ಮ ಸಂಸಾರ ಕಾಪಾಡಪ್ಪ!.

ಭೀಮ : ಹೆದರಬೇಡಿ, ನಾನು ಮಧ್ಯಮ, ನಮಸ್ಕಾರ ಮಾಡುತ್ತೇನೆ (ಮುದುಕನ ಕಾಲು ಮುಟ್ಟಿ ನಮಸ್ಕಾರ ಮಾಡುತ್ತಾನೆ).

ವಯಸ್ಸಿಗ : ವಾಯುವಿನಂತೆ ದೀರ್ಘಕಾಲ ಬಾಳು.

ಭೀಮ : ಅನುಗ್ರಹವಾಯಿತು. ನಿಮ್ಮ ಭಯಕ್ಕೆ ಕಾರಣ ಏನು?

ವಯಸ್ಸಿಗ : ಕೇಳಪ್ಪ. ಇಲ್ಲಿಂದ ಉತ್ತರಕ್ಕೆ ಉದ್ಯಾಮಕ ಅನ್ನೋ ಊರಿದೆ. ಅಲ್ಲಿಗೆ ನನ್ನ ಸೋದರಮಾವನ ಮಗನ ಉಪನಯನಕ್ಕೆ ಹೆಂಡತಿ ಮಕ್ಕಳ ಜತೆ ಹೊರಟಿದ್ದೆ. ಈತ ಅಡ್ಡಗಟ್ಟಿದ.

| | | |
|---|---|---|
| **ಭೀಮ** | : | ಓಹೋ ಹಾಗೋ? ಇವನಿಗೆ ತಕ್ಕ ಶಾಸ್ತಿ ಮಾಡುತ್ತೇನೆ (ಘಟೋತ್ಕಚನಿಗೆ). ಅಯ್ಯಾ! ಮಹಾಪುರುಷ ಸ್ವಲ್ಪ ಇರು. ಇವರಿಗೆ ಏಕೆ ಹಿಂಸೆ ಕೊಡುತ್ತಿ? ಇವರನ್ನು ಬಿಟ್ಟುಬಿಡು. |
| **ಘಟೋತ್ಕಚ** | : | (ಮಧ್ಯದ ಮಗನನ್ನು ಹಿಡಿದುಕೊಂಡು) 'ನಮ್ಮಪ್ಪನೇ ಬಂದು ಬಿಡು ಎಂದು ಜೋರು ಮಾಡಿದರೂ ಬಿಡೋದಿಲ್ಲ! ನಮ್ಮಮ್ಮನ ಆಜ್ಞೆಯಾಗಿದೆ! ಅದರಂತೆ ಹಿಡಿದಿದ್ದೇನೆ'. |
| **ಭೀಮ** | : | ಹೌದೇ? ನಿನ್ನ ತಾಯಿ ಯಾರು? |
| **ಘಟೋತ್ಕಚ** | : | (ಹೆಮ್ಮೆಯಿಂದ) ಹಿಡಿಂಬೆ ಅಂತ ಹೆಸರು! ಕುರುಕುಲಕ್ಕೆ ದೀವಿಗೆಯ ಹಾಗೆ ಪ್ರಕಾಶಿಸುವ ಮಹಾತ್ಮನನ್ನು ಮದುವೆಯಾಗಿರುವ ಪುಣ್ಯವಂತೆ. |
| **ಭೀಮ** | : | (ಹರ್ಷದಿಂದ) ಹಾಗೋ! ನೀನು ಹಿಡಿಂಬೆಯ ಮಗನೋ? ಆಕಾರ, ಬಲ, ಗುಣಗಳಲ್ಲಿ ನಿನ್ನ ತಂದೆ ಹಾಗೂ ಅವನ ಸೋದರರನ್ನು ಹೋಲುತ್ತಿ. ಆದರೆ ಕರುಣೆ ತೋರಿಸದ ನಿನ್ನ ಬುದ್ಧಿ ಯಾರ ಬುದ್ಧಿಗೆ ಹೋಲುತ್ತದೋ ಕಾಣೆ. ಅಪ್ಪ, ಹುಡುಗ, ಅವನನ್ನು ಬಿಟ್ಟುಬಿಡು. |
| **ಘಟೋತ್ಕಚ** | : | ಬಿಡೋದಿಲ್ಲ!. |
| **ಭೀಮ** | : | **(ವಯಸ್ಸಿಗನಿಗೆ)** ನೀವು ನಿಮ್ಮ ಮಗನನ್ನು ಕರೆದುಕೊಂಡು ಹೋಗಿ. ಇವನ ಜತೆ ನಾನು ಹೋಗುತ್ತೇನೆ. |
| **ಘಟೋತ್ಕಚ** | : | ಹಾಗಾದರೆ ನನ್ನ ಜತೆ ನೀನೇ ಬರಬೇಕು (ಘಟೋತ್ಕಚ ನಡುಮಗನ ತೋಳನ್ನು ಬಿಡುತ್ತಾನೆ). |
| **ಭೀಮ** | : | ಕರೆದಾಕ್ಷಣ ಇನ್ನೊಬ್ಬನ ಹಿಂದೆ ಹೋಗೋನಲ್ಲ. ನಿನಗೆ ಶಕ್ತಿ ಇದ್ದರೆ ಬಲಾತ್ಕಾರವಾಗಿ ಎಳೆದುಕೊಂಡು ಹೋಗು. |
| **ಘಟೋತ್ಕಚ** | : | ಸರಿ ಹಾಗಾದರೆ, ನಿನ್ನ ಆಯುಧ ತೆಗೆದುಕೋ. |
| **ಭೀಮ** | : | ಬಲವಾದ ತೋಳುಗಳೇ ನನ್ನ ಆಯುಧ. |
| **ಘಟೋತ್ಕಚ** | : | ನನ್ನ ತಂದೆ ಭೀಮಸೇನ ಹೇಳೋದಕ್ಕೆ ಯೋಗ್ಯವಾದ ಮಾತು ಇದು. |
| **ಭೀಮ** | : | ಅದು ಯಾರಪ್ಪ ಆ ಭೀಮಸೇನ? ಅವನು ಬ್ರಹ್ಮ, ಶಿವನಿಗೆ, ಸಮಾನನೆ? ಇಲ್ಲ ಇಂದ್ರ, ಕೃಷ್ಣ, ಯಮ, ಇವರಲ್ಲಿ ಯಾರಿಗೆ ಸಮಾನ? |
| **ಘಟೋತ್ಕಚ** | : | ಅವರೆಲ್ಲರಿಗೂ |
| **ಭೀಮ** | : | ಛೇ! ಸುಳ್ಳು. |
| **ಘಟೋತ್ಕಚ** | : | ಸುಳ್ಳು ಅನ್ನುತ್ತೀಯಾ? ನನ್ನ ತಂದೆಯನ್ನು ಹೀಯಾಳಿಸುತ್ತೀಯಾ? ಇಲ್ಲಿ ನೋಡು ಈ ದೊಡ್ಡ ಮರ. ಇದನ್ನ ಬೇರುಸಹಿತ ಕಿತ್ತು ಹೊಡಿಯುವೆನು. |





ಭೀಮ : ಕೋಪ ಬಂದ ಕಾಡಾನೆಗೆ ಅದೇ ಕಾಡಿನ ಹುಲಿ ಹೆದರುವುದಿಲ್ಲ.

ಘಟೋತ್ಕಚ : (ಬಂಡೆಯನ್ನು ಭೀಮನ ಮೇಲೆ ಎಸೆಯುತ್ತಾನೆ) ಬಂಡೆಯಿಂದಲೂ ನಿನ್ನನ್ನ ಕೊಲ್ಲೋಕಾಗಲಿಲ್ಲ, ಆಗಲಿ ನೋಡು ನಾನು ಭೀಮನ ಮಗ. ವಾಯುದೇವನ ಮೊಮ್ಮಗ! ಮಲ್ಲಯುದ್ಧದಲ್ಲಿ ನನ್ನ ಸಮಾನರಿಲ್ಲ. ಸಿದ್ಧನಾಗು! (ಇಬ್ಬರೂ ಕಾಳಗ ಮಾಡುತ್ತಾರೆ. ಭೀಮನನ್ನು ಪಟ್ಟಿನಲ್ಲಿ ಹಿಡಿದು) (ಸ್ವಗತ) ಗಟ್ಟಿ ಹಗ್ಗದಿಂದ ಆನೆ ಕಟ್ಟುವ ಹಾಗೆ ನನ್ನ ತೋಳಿನಿಂದ ನಿನ್ನನ್ನು ಬಿಗಿದಿದ್ದೇನೆ. ಹೇಗೆ ಬಿಡಿಸಿಕೊಳ್ಳುತ್ತೀಯೋ ನೋಡುತ್ತೇನೆ.

ಭೀಮ : (ಬಿಡಿಸಿಕೊಂಡು) ನೋಡಿದೆಯಾ? ತೋಳಿನಲ್ಲಿ ಬಲವಿದೆ ಅನ್ನುವ ದರ್ಪವನ್ನು ಬಿಟ್ಟು ಬಿಡು. ನನಗಂತೂ ಮಲ್ಲಯುದ್ಧದಲ್ಲಿ ತೊಂದರೆಯೆನ್ನುವುದೇ ಇಲ್ಲ!.

ಘಟೋತ್ಕಚ : ಆಗಲಿ ನನ್ನ ತಾಯಿ ಕೊಟ್ಟ ಮಾಯಾಪಾಶದಿಂದ ನಿನ್ನನ್ನು ಬಿಗಿದು ಹೊತ್ತುಕೊಂಡು ಹೋಗುತ್ತೇನೆ (ಮಂತ್ರವನ್ನು ಜಪಿಸುತ್ತಾನೆ. ಮಾಯಾ ಪಾಶದಲ್ಲಿ ಭೀಮಸೇನನನ್ನು ಸಿಲುಕಿಸುತ್ತಾನೆ).

ಭೀಮ : (ಮಂತ್ರವನ್ನು ಜಪಿಸುತ್ತಾನೆ) ಮಹೇಶ್ವರನಿಂದ ದೊರೆತಿರುವ ಮಾಯಾಪಾಶ ಮೋಕ್ಷಮಂತ್ರದಿಂದ ನಿನ್ನ ಕಟ್ಟುಗಳನ್ನು ಬಿಡಿಸಿಕೊಂಡಿದ್ದೇನೆ.

ಘಟೋತ್ಕಚ : (ಸ್ವಗತ) ಈಗ ಏನು ಮಾಡೋದು? (ಭೀಮನಿಗೆ) ಆಗಲಿ ನಮ್ಮ ಹಿಂದಿನ ಒಪ್ಪಂದದ ಹಾಗೇ ಮಾಡು.

ಭೀಮ : ಒಪ್ಪಂದ ಯಾವ ಒಪ್ಪಂದ? ಓ ಅದೇ ಜ್ಞಾಪಕಕ್ಕೆ ಬಂತು, ಆಗಲಿ ಬರುತ್ತೇನೆ, ನಡೆ (ಘಟೋತ್ಕಚನ ಜತೆಯಲ್ಲಿ ಹೊರಡುತ್ತಾನೆ).

ಘಟೋತ್ಕಚ : ಇದೇ ನಮ್ಮ ಮನೆ. ಇಲ್ಲೇ ಇರು. ನೀನು ಬಂದಿರೋದನ್ನ ನನ್ನ ತಾಯಿಗೆ ತಿಳಿಸುತ್ತೇನೆ(ಎರಡು ಹೆಜ್ಜೆ ನಡೆದು ಹೊರಕ್ಕೆ, ಕೂಗುತ್ತ). ಅಮ್ಮ ನಾನು ಘಟೋತ್ಕಚ ಬಂದಿದ್ದೇನೆ. ನಿನಗೆ ಇಷ್ಟವಾದ ಆಹಾರ ತಂದಿದ್ದೇನೆ. ಹೊರಗೆ ಬಾರಮ್ಮ.

ಹಿಡಿಂಬೆ : ಸಂತೋಷ ಮಗು ಬರುತ್ತೇನೆ(ದೃಢಕಾಯದ ಹೆಂಗಸು ಪ್ರವೇಶಿಸಿ, ಭೀಮನನ್ನು ನೋಡಿ, ಘಟೋತ್ಕಚನಿಗೆ). ಓಹ್ ಇವರೇ ಮಗನೇ, ಇವರೇ ನನ್ನ ದೇವರು ಇವರಿಗೆ ನಮಸ್ಕರಿಸು(ಹೋಗಿ ಭೀಮನ ಕಾಲು ಮುಟ್ಟಿ ನಮಸ್ಕರಿಸುತ್ತಾಳೆ).

ಭೀಮ : ಯಾರಮ್ಮ ನೀವು? ನನಗೇಕೆ ನಮಸ್ಕಾರ ಮಾಡುತ್ತೀರಿ? (ಹಿಡಿಂಬೆ ಎದ್ದು ನಿಲ್ಲುತ್ತಾಳೆ. ಅವಳನ್ನು ನೋಡಿ) ಓ! ಹಿಡಿಂಬೆ? ಏನಿದು..... ? (ಕಿವಿಯಲ್ಲಿ ಉಸಿರುತ್ತಾಳೆ) !

ಹಿಡಿಂಬೆ : ಕಂದ ಘಟೋತ್ಕಚ ಇವರೇ ನಿನ್ನ ತಂದೆ, ನಮಸ್ಕರಿಸು.

ಘಟೋತ್ಕಚ : ಅನುಗ್ರಹೀತನಾದೆ ತಂದೆ (ನಮಸ್ಕರಿಸಿ ನಿಲ್ಲುತ್ತಾನೆ)

**(ತೆರೆ ಸರಿಯುವುದು)**

## ಕರ್ತೃ – ಭಾವ – ಆಕರ

**ಭಾಸನು** ಸಂಸ್ಕೃತದ ಪ್ರಸಿದ್ಧ ನಾಟಕಕಾರ. ಈತ ಕಾಳಿದಾಸನಿಗಿಂತ ಸುಮಾರು ಐದು ನೂರು ವರ್ಷಗಳಷ್ಟು ಹಿಂದಿನವ. ಈತನ ಕಾಲ ಸುಮಾರು **ಕ್ರಿಸ್ತ ಪೂರ್ವ ೩೦೦**. ಪೂರ್ಣ ರೂಪದಲ್ಲಿ ದೊರೆತಿರುವ ನಾಟಕಗಳಲ್ಲಿ ಭಾಸನ ನಾಟಕಗಳೇ ಅತ್ಯಂತ ಪ್ರಾಚೀನವಾದುವು. ಈತ ದಕ್ಷಿಣ ಭಾರತದವ. **೨೫–೩೦ ನಾಟಕ**ಗಳನ್ನು ಬರೆದಿರುವನೆಂದು ತಿಳಿದು ಬಂದಿದೆ. ಆದರೆ ಲಭಿಸಿರುವ ನಾಟಕಗಳು **೧೪** ಮಾತ್ರ. **ಪ್ರತಿಜ್ಞಾ ಯೌಗಂಧರಾಯಣ, ಸ್ವಪ್ನವಾಸವದತ್ತ, ಚಾರುದತ್ತ** ಇವು ಬೃಹತ್ಕಥಾ ಆಧಾರಿತ. **ಪ್ರತಿಮಾನಾಟಕ, ಅಭಿಷೇಕ, ಯಜ್ಞಫಲ** ಇವು ರಾಮಾಯಣ ಕಥಾನಕಕ್ಕೆ ಸಂಬಂಧಿಸಿದವು. **ಪಂಚರಾತ್ರ, ಮಧ್ಯಮ ವ್ಯಾಯೋಗ, ದೂತವಾಕ್ಯ, ದೂತ ಘಟೋತ್ಕಚ, ಕರ್ಣಭಾರ, ಊರುಭಂಗ, ಬಾಲಚರಿತ ಇವು** ಮಹಾಭಾರತದ ಪ್ರಸಂಗಗಳು.

* * * *

ಪ್ರಕೃತ ನಾಟಕ ವಿಶೇಷವಾದುದು. **ಶಿಷ್ಟಪಾಲನಾ** ನೀತಿಯಂತೆ ರೂಪಿತವಾಗಿದೆ. ಪೌರಾಣಿಕ ನಾಟಕಗಳಲ್ಲಿ ತಂದೆ ಮಕ್ಕಳ ಕಾಳಗಗಳಾದ, ಅರ್ಜುನ–ಬಭ್ರುವಾಹನ, ರಾಮ–ಕುಶಲವರ ಕಾಳಗದಂತೆಯೇ ಭೀಮಸೇನ–ಘಟೋತ್ಕಚರ ಕಾಳಗವೂ ಒಂದು. ಕುಟುಂಬವೊಂದನ್ನು ರಕ್ಷಿಸಲು ವಚನಕೊಟ್ಟ ಭೀಮ ವಚನ ಪರಿಪಾಲನೆಗಾಗಿ ಘಟೋತ್ಕಚನನ್ನು ಮಗನೆಂದು ತಿಳಿದ ಮೇಲೂ ಅವನೊಡನೆ ಯುದ್ಧ ಮಾಡುತ್ತಾನೆ. ಅನಂತರ ಒಪ್ಪಂದದಂತೆ ಅವನೊಂದಿಗೆ ತೆರಳಿದಾಗ ಎಲ್ಲರ ಸಮಾಗಮವಾಗುತ್ತದೆ.

* * * *

ಪ್ರಕೃತ ಪಾಠ **ಸಮಾಗಮ** ಎಂಬುದು **ಭಾಸನ ಮಧ್ಯಮ ವ್ಯಾಯೋಗ** ನಾಟಕದ ಕನ್ನಡ ಅನುವಾದಿತ ರೂಪ. ಪಠ್ಯಪುಸ್ತಕ ರಚನಾಸಮಿತಿಯು ಅನುವಾದ ಕಾರ್ಯದಲ್ಲಿ **ಎಸ್.ವಿ. ಪರಮೇಶ್ವರಭಟ್ಟ** ಅವರ **ಮಧ್ಯಮ ವ್ಯಾಯೋಗ** ಹಾಗೂ **ಬಿ. ಚಂದ್ರಶೇಖರ** ಅವರ **ಮಧ್ಯಮ ವ್ಯಾಯೋಗ** ಕೃತಿಗಳನ್ನು ಸಂಪಾದನೆಗೆ ಬಳಸಿಕೊಂಡಿದೆ.

## ಪದ–ಗದ್ಯಾರ್ಥ

ನೈದಿಲೆ–ಕುಮುದ; ವ್ಯೋಮ–ಆಕಾಶ; ವೈಢೂರ್ಯ–ನವರತ್ನಗಳಲ್ಲಿ ಒಂದು; ರಂಜಿಸುವ–ಹೊಳೆಯುವ, ಸಂತೋಷಗೊಳಿಸುವ; ವಿಜ್ಞಾಪನೆ–ಬಿನ್ನಹ, ಕೋರಿಕೆ; ಬೇಳ್ವೆ–ಆಹುತಿ, ಬಲಿ; ದೀಪ್ತ–ಕಾಂತಿಯುಕ್ತ; ಅಭವ–ಶಿವ; ಕಗ್ಗಾಡು–ದಟ್ಟ ಅರಣ್ಯ; ಸಾತ್ವಿಕ–ಸತ್ವಗುಣಯುತ; ತಾರಕಸ್ವರ–ಏರು ದನಿ, ಗಟ್ಟಿದನಿ; ಶಾಸ್ತಿ–ದಂಡನೆ, ಶಿಕ್ಷೆ

## ಪಠ್ಯಾಧಾರ ಟಿಪ್ಪಣಿ

**ಪಾಂಡವ ಮಧ್ಯಮ** : ಖ್ಯಾತ ಸಂಸ್ಕೃತ ನಾಟಕಕಾರ ಭಾಸ ಮಹಾಕವಿಯ ನಾಟಕಗಳಲ್ಲಿ 'ಮಧ್ಯಮ ವ್ಯಾಯೋಗ' ಎಂಬುದು ಕೂಡಾ ಒಂದು. ಇದು ಭೀಮ ಮತ್ತು ಅವನ ಮಗ ಘಟೋತ್ಕಚನ ಸಮಾಗಮದ ಕಥೆಯನ್ನು ಒಳಗೊಂಡ ಕಥಾನಕ. ಭಾರತದ ರಾಜರಲ್ಲಿ ಅವರ ಹಿರಿಯ ಪತ್ನಿಯ ಮಕ್ಕಳಿಗೆ ಹೆಚ್ಚು ಪ್ರಾಧಾನ್ಯ. ಹಾಗೆಯೇ ಪಾಂಡುರಾಜನ ಅಪ್ಪಣೆ ಮೇರೆಗೆ ಕುಂತಿಯಲ್ಲಿ ಜನಿಸಿದ ಮಕ್ಕಳು ಮೂವರು. ಅವರೇ ಧರ್ಮರಾಯ, ಭೀಮ ಮತ್ತು ಅರ್ಜುನ, ಮಾದ್ರಿಯಲ್ಲಿ ನಕುಲ ಸಹದೇವ ಅವಳಿ ಮಕ್ಕಳು ಜನಿಸಿದರು. ಕವಿ ಭಾಸನ ದೃಷ್ಟಿಯಲ್ಲಿ ಇವರಿಗೆ ಪ್ರಾಧಾನ್ಯವಿಲ್ಲ, ಹಾಗಾಗಿ ಕವಿಯು ಇಲ್ಲಿ ಭೀಮಸೇನನನ್ನು ಪಾಂಡವ ಮಧ್ಯಮ ಎಂದು ಕರೆದಿದ್ದಾನೆ. ಈ ಕಾರಣದಿಂದ ಪ್ರಸ್ತುತ ಪಾಠದಲ್ಲಿ ಬರುವ ಪಾಂಡವ ಮಧ್ಯಮ ಎಂದರೆ ಭೀಮಸೇನ. ಇವನು ಪಂಚಭೂತಗಳಲ್ಲಿ ಮಧ್ಯಮನಾದ ವಾಯುದೇವನ ಅನುಗ್ರಹದಿಂದ ಜನಿಸಿದವನು.

**ಪಂಚಭೂತ** : ಭೂಮಿ, ನೀರು, ವಾಯು, ಅಗ್ನಿ, ಆಕಾಶ – ಐದು ಮೂಲವಸ್ತುಗಳು.

**ಹಿಡಿಂಬೆ** : ಹಿಡಿಂಬನ ತಂಗಿ. ಪಾಂಡವರು ಅರಗಿನಮನೆಯಿಂದ ಹೊರಬಿದ್ದು ಅರಣ್ಯವನ್ನು ಸೇರಿದಾಗ ಅಣ್ಣನಿಗೆ ಆಹಾರ ಹುಡುಕುತ್ತಾ ಬಂದ ಈಕೆ ಭೀಮನ ದೃಢಕಾಯ ಮತ್ತು ಸೌಂದರ್ಯವನ್ನು ಕಂಡು ಮೋಹಿತಳಾಗಿ ಆತನನ್ನು ವರಿಸುತ್ತಾಳೆ. ಇವರಿಬ್ಬರ ಮಗನೇ ಘಟೋತ್ಕಚ.

**ಪಾರಣೆ** : ಉಪವಾಸ ದಿನದ ಮಾರನೆಯ ದಿನ ಮಾಡುವ ಹಬ್ಬದೂಟ.

**ಧೌಮ್ಯಮಹರ್ಷಿ** : ಅಷ್ಟವಸುಗಳಲ್ಲಿ ಒಬ್ಬನಾದ ಪ್ರತ್ಯೂಷನ ಮಗ, ಬ್ರಹ್ಮರ್ಷಿಯಾದ ದೇವಲನ ಒಡಹುಟ್ಟಿದವ, ಪಾಂಡವರ ಪುರೋಹಿತ, ಅವರ ವನವಾಸ ಕಾಲದಲ್ಲಿ ಅನೇಕ ತೀರ್ಥಗಳ ಮಹಿಮೆಯನ್ನು ವಿವರಿಸಿದವ. ಅಲ್ಲದೆ ಪಾಂಡವರು ಅಜ್ಞಾತವಾಸಕ್ಕೆ ಹೊರಟಾಗ ಅರಮನೆಯಲ್ಲಿ ಸೇವಕರು ವಾಸಮಾಡಬೇಕಾದ ರೀತಿಯನ್ನೂ ಅವರ ಕರ್ತವ್ಯಗಳನ್ನೂ ಅವರಿಗೆ ಅರುಹಿದವ, ಪಾಂಡವರು ಅಜ್ಞಾತವಾಸ ಮಾಡುತ್ತಿದ್ದಾಗ ಅವರ ಅಗ್ನಿಹೋತ್ರಗಳನ್ನು ಈತ ಕಾಪಾಡಿಕೊಂಡಿದ್ದ.

**ತ್ರಿಪುರ ದಹನ:** ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬವರಿಗಾಗಿ ಬ್ರಹ್ಮನ ವರಪ್ರಸಾದದಿಂದ ಮಯನು ಭೂಮಿಯ ಮೇಲೆ ಕಬ್ಬಿಣದ, ಅಂತರಿಕ್ಷದಲ್ಲಿ ಬೆಳ್ಳಿಯ, ಅದರ ಮೇಲ್ಭಾಗದಲ್ಲಿ ಸುವರ್ಣದ ಪಟ್ಟಣಗಳನ್ನು ನಿರ್ಮಿಸಿದನು. ಈ ಮೂರು ಪಟ್ಟಣಗಳು ಪ್ರತಿ ವರ್ಷ ಕಾರ್ತಿಕ ಮಾಸದ ಅಮಾವಾಸ್ಯೆಯ ದಿನ ಒಂದುಗೂಡುತ್ತಿದ್ದವು ಆ ಸಂದರ್ಭದಲ್ಲಿ ಯಾವನೇ ಒಬ್ಬ ಬಿಲ್ಲುಗಾರ ಒಂದೇ ಬಾಣದಿಂದ ಈ ಮೂರು ಪಟ್ಟಣಗಳನ್ನು ಧ್ವಂಸಮಾಡುವುದಕ್ಕೆ ಸಮರ್ಥನಾಗುತ್ತಾನೆಂದು ಬ್ರಹ್ಮದೇವನು ಎಚ್ಚರಿಸಿದ್ದನು. ತಾರಾಕ್ಷನು ಸುವರ್ಣ ಪುರದಲ್ಲೂ ಕಮಲಾಕ್ಷನು ಬೆಳ್ಳಿಯ ಪುರದಲ್ಲೂ ವಿದ್ಯುನ್ಮಾಲಿಯು ಕಬ್ಬಿಣದ ಪುರದಲ್ಲೂ ತಮ್ಮವರೊಂದಿಗೆ ಮಯನ ಆದೇಶದಂತೆ ದೈವಭಕ್ತಿ ಉಳ್ಳವರಾಗಿ ಅನ್ಯಾಯ, ಅತ್ಯಾಚಾರ ಮಾಡದೆ ವಾಸಿಸುತ್ತಿದ್ದರು. ಆದರೆ ವಿಧಿವಿಲಾಸದಂತೆ ಈ ಮೂವರು ರಾಕ್ಷಸರು ದಿನೇದಿನೇ ತಮ್ಮ ನಿಷ್ಠೆಯಲ್ಲಿ ಬದಲಾವಣೆ ಮಾಡಿ ದೈವಭಕ್ತಿಯಿಂದ ದೂರ ಸರಿದು ಅನ್ಯಾಯ ಅತ್ಯಾಚಾರಗಳಲ್ಲಿ ತೊಡಗಿದರು. ಇವರ ಹಾವಳಿಯನ್ನು ತಡೆಯಲಾರದೆ ದೇವತೆಗಳು ಶಿವನನ್ನು ಮೊರೆಹೊಕ್ಕರು ಶಿವನು ಭೂಮಿಯನ್ನು ರಥವನ್ನಾಗಿಸಿಕೊಂಡು ಚತುರ್ವೇದಗಳನ್ನು ಕುದುರೆಗಳನ್ನಾಗಿಯೂ ಬ್ರಹ್ಮನನ್ನು ಸಾರಥಿಯನ್ನಾಗಿಯೂ ಮಂದರ ಪರ್ವತವನ್ನು ಬಿಲ್ಲನ್ನಾಗಿಯೂ ಸಮುದ್ರವನ್ನು ಬತ್ತಳಿಕೆಯನ್ನಾಗಿಯೂ, ಆದಿಶೇಷನನ್ನು ಹೆದೆಯನ್ನಾಗಿಯೂ, ವಿಷ್ಣುವನ್ನು ಬಾಣವನ್ನಾಗಿಯೂ ಮಾಡಿಕೊಂಡು ಆ ಮೂರು ಪಟ್ಟಣಗಳು ಒಂದು ಕಡೆ ಸೇರಿದ ಸಂದರ್ಭದಲ್ಲಿ ಒಂದೇ ಬಾಣದಿಂದ ಆ ಮೂರು ಪಟ್ಟಣಗಳನ್ನು ಸುಟ್ಟು ಬೂದಿಮಾಡಿದನು. ಈ ದಿನದ ಸಂಕೇತವಾಗಿ ಇಂದಿಗೂ ಭೂಲೋಕದಲ್ಲಿ ಕಾರ್ತಿಕ ಮಾಸದ ಅಮಾವಾಸ್ಯೆಯ ದಿನ ದೀಪೋತ್ಸವ ನಡೆಯುತ್ತಿದೆ.



## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು.**

**ಅ. ಬಿಟ್ಟ ಜಾಗವನ್ನು ಸೂಕ್ತ ಪದದಿಂದ ತುಂಬಿ**

೧. ಹೆದರಬೇಡಿ ಮಕ್ಕಳೆ, ಅವನ ಮಾತಿನಲ್ಲಿ ______________ ಇದೆ.

೨. ನನ್ನ ತಾಯಿಗೆ ______________ ಇಷ್ಟವಿಲ್ಲ.

೩. ಇಲ್ಲಿಂದ ಉತ್ತರಕ್ಕೆ ______________ ಅನ್ನೋ ಊರಿದೆ.

೪. ಕುರುಕುಲಕ್ಕೆ ದೀವಿಗೆಯ ಹಾಗೆ ಪ್ರಕಾಶಿಸುವ ______________ ಮದುವೆಯಾಗಿರುವ ಪುಣ್ಯವಂತೆ.

**ಆ. ಮೊದಲೆರಡು ಪದಕ್ಕೆ ಸಂಬಂಧಿಸಿದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದವನ್ನು ಬರೆಯಿರಿ.**

೧. ಪ್ರತಿಮಾನಾಟಕ : ರಾಮಾಯಣ : : ಚಾರುದತ್ತ : ______________

೨. ಪ್ರಾಣ : ಹರಣ : : ರಾಕ್ಷಸ : ______________

೩. ಧೌಮ್ಯ : ಮಹರ್ಷಿ : : ಜಲಕ್ಲಿನ್ನ : ________________

೪. ಬರಲಿ : ವಿಧ್ಯರ್ಥಕ ಕ್ರಿಯಾಪದ : : ಬಂದಾನು : ________________

೫. ಕತೆ : ಕತೆಗಾರ : : ನಾಟಕ : ________________

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ ಪ್ರಶ್ನೆಗಳು**

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ನಾಲ್ಕು/ಐದು ವಾಕ್ಯಗಳಲ್ಲಿ ಉತ್ತರಿಸಿ**

೧. ಸೂತ್ರಧಾರ ಶ್ರೀಹರಿಯನ್ನು ಹೊಗಳಿರುವ ಬಗೆ ಹೇಗೆ?

೨. ನಡುಮಗ ಘಟೋತ್ಕಚನ ರೂಪವನ್ನು ಹೇಗೆ ವರ್ಣಿಸಿದ?

೩. ವಯಸ್ಸಿಗ ಹೇಳಿದ ನಡುಮಗನ ಗುಣಗಳನ್ನು ತಿಳಿಸಿ.

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ಯಾರು ಆಹಾರವಾಗಬೇಕೆಂಬ ವಿಷಯದಲ್ಲಿ ವಯಸ್ಸಿಗನ ಸಂಸಾರದಲ್ಲಿ ನಡೆದ ವಾದ ಮತ್ತು ನಿರ್ಧಾರವನ್ನು ಬರೆಯಿರಿ.

೨. ಭೀಮ–ಘಟೋತ್ಕಚರ ನಡುವಿನ ಹೋರಾಟವನ್ನು ವಿವರಿಸಿ.

**ಇ. ಕೊಟ್ಟಿರುವ ವಾಕ್ಯಗಳ ಸಂದರ್ಭ ಸಹಿತ ಸ್ವಾರಸ್ಯವನ್ನು ಬರೆಯಿರಿ**

೧. "ವೈಢೂರ್ಯ ಸೇತುವೆಯ ನಿರ್ಮಿಸಿದ ಪಾದ"

೨ "ತಂದೆ ತಾಯಿಯರಿಗೆ ಬೇಡವಾದೋನು ನಾನು"

೩. "ಬಲವಾದ ತೋಳುಗಳೇ ನನ್ನ ಆಯುಧ"

೪. "ಕೋಪ ಬಂದ ಕಾಡಾನೆಗೆ ಅದೇ ಕಾಡಿನ ಹುಲಿ ಹೆದರುವುದಿಲ್ಲ"



**ಈ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು/ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ರಕ್ಷಣೆಯ ವಿಷಯದಲ್ಲಿ ಪಾಂಡವರ ನಿಲುವು ಏನು?

೨. ತಾನು ಹಿಡಿಂಬೆಯ ಮಗನೆಂದು ಘಟೋತ್ಕಚನು ಹೇಳಿದಾಗ ಭೀಮನ ಪ್ರತಿಕ್ರಿಯೆ ಏನು?

೩. ಘಟೋತ್ಕಚನು ತಾನು ಮಲ್ಲಯುದ್ಧದಲ್ಲಿ ಪ್ರವೀಣನೆಂದು ತಿಳಿಸಿದ್ದನ್ನು ವಿವರಿಸಿ?

**ಉ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ಜಲಕ್ಲಿನ್ನ ಮುನಿಗಳ ಎಚ್ಚರಿಕೆ ಏನು?

೨. ಕಾದಾಡೋದು ಯಾರಿಗೆ ಇಷ್ಟವಾದ ವಿಚಾರ?

೩.	ಪಾಂಡವರು ಧೌಮ್ಯ ಮಹರ್ಷಿಗಳ ಆಶ್ರಮಕ್ಕೆ ಹೋಗಿದ್ದುದು ಏಕೆ?

೪.	ಘಟೋತ್ಕಚನಿಗೆ ತಾಯಿ ಏನೆಂದು ಕೋರಿಕೆ ಇಟ್ಟಿದ್ದಳು?

೫.	ಭೀಮನೊಂದಿಗೆ ಮನೆಗೆ ಹೋದ ಘಟೋತ್ಕಚನು ತಾಯಿಗೆ ಏನೆಂದು ಹೇಳಿದನು?

## ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**

### ಹಳಗನ್ನಡದ ವಿಭಕ್ತಿ ಪ್ರತ್ಯಯಗಳು

| ವಿಭಕ್ತಿ | ಕಾರಕಾರ್ಥಗಳು | ಪ್ರತ್ಯಯ ಹಳಗನ್ನಡ | ಏಕವಚನ | ಬಹುವಚನ |
|---|---|---|---|---|
| **ಪ್ರಥಮಾ** | ಕರ್ತ್ರರ್ಥ | –ಮ್ | ಅರಸಂ | ಅರಸರ್ |
| **ದ್ವಿತೀಯಾ** | ಕರ್ಮಾರ್ಥ | –ಅಂ | ಅರಸನಂ | ಅರಸರಂ |
| **ತೃತೀಯಾ** | ಕರಣಾರ್ಥ | –ಇಂ, –ಇಂದಂ, –ಇಂದೆ | ಅರಸನಿಂ, ಅರಸನಿಂದಂ ಅರಸನಿಂದೆ | ಅರಸರಿಂ ಅರಸರಿಂದಂ ಅರಸರಿಂದೆ |
| **ಚತುರ್ಥೀ** | ಸಂಪ್ರದಾನ | –ಗೆ, ಕೆ, –ಕ್ಕೆ | ಅರಸಂಗೆ | ಅರಸರ್ಗೆ |
| **ಪಂಚಮೀ** | ಅಪಾದಾನ | –ಅತ್ತಣಿಂ –ಅತ್ತಣಿಂದಂ –ಅತ್ತಣಿಂದೆ | ಅರಸನತ್ತಣಿಂ ಅರಸನತ್ತಣಿಂದಂ ಅರಸನತ್ತಣಿಂದೆ | ಅರಸರತ್ತಣಿಂ ಅರಸರತ್ತಣಿಂದಂ ಅರಸರತ್ತಣಿಂದೆ |
| **ಷಷ್ಠೀ** | ಸಂಬಂಧ | –ಅ | ಅರಸನ | ಅರಸರ |
| **ಸಪ್ತಮೀ** | ಅಧಿಕರಣ | –ಒಳ್ | ಅರಸನೊಳ್ | ಅರಸರೊಳ್ |



**ವಿಭಕ್ತಿಪಲ್ಲಟ :**

ನಾವು ಮಾತನಾಡುವಾಗ ಪದ, ಪ್ರಕೃತಿಗಳಿಗೆ ಯಾವ್ಯಾವ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಹೇಳಬೇಕೋ ಅದನ್ನು ಬಿಟ್ಟು ಬೇರೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಹೇಳುವುದುಂಟು ಹೀಗೆ ಸೇರಿಸಬೇಕಾದ ವಿಭಕ್ತಿ ಪ್ರತ್ಯಯಕ್ಕೆ ಬದಲಾಗಿ ಬೇರೆ ವಿಭಕ್ತಿ ಪ್ರತ್ಯಯವನ್ನು ಸೇರಿಸಿ ಹೇಳುವುದೇ **ವಿಭಕ್ತಿ ಪಲ್ಲಟ**ವೆನ್ನಿಸುತ್ತದೆ.

ಉ.ದಾ.: – **ಬಂಡಿಯನ್ನು ಹತ್ತಿದನು** (ದ್ವಿತೀಯಾ) – **ಬಂಡಿಗೆ ಹತ್ತಿದನು** (ಚತುರ್ಥೀ)

– **ಆತನ ದೆಸೆಯಿಂದ ಕೇಡಾಯ್ತು** (ಪಂಚಮೀ) – **ಆತನಿಂದ ಕೇಡಾಯ್ತು** (ತೃತೀಯಾ)

– **ಮನೆಯ ಯಜಮಾನ** (ಷಷ್ಠೀ) – **ಮನೆಗೆ ಯಜಮಾನ** (ಚತುರ್ಥೀ)

– **ಹಳ್ಳದಲ್ಲಿ ಬಿದ್ದನು** (ಸಪ್ತಮೀ) – **ಹಳಕ್ಕೆ ಬಿದ್ದನು** (ಚತುರ್ಥೀ)

## ಭಾಷಾ ಚಟುವಟಿಕೆ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ**

೧. ಹಳಗನ್ನಡದ ವಿಭಕ್ತಿ ಪ್ರತ್ಯಯಗಳಾವುವು? – ಪಟ್ಟಿ ಮಾಡಿ

೨. ವಿಭಕ್ತಿಪಲ್ಲಟ ಎಂದರೇನು? ನಿದರ್ಶನ ನೀಡಿ

## ಪೂರಕ ಓದು

- **ಎಸ್.ವಿ. ಪರಮೇಶ್ವರಭಟ್ಟ** ಅವರ **ಭಾಸ ಸಂಪುಟ (ಕನ್ನಡ ಅನುವಾದ)** ಓದಿ.
- **ಬಿ. ಚಂದ್ರಶೇಖರ ಅವರ 'ಮಧ್ಯಮ ವ್ಯಾಯೋಗ'** ನಾಟಕ ಓದಿ.





## ಗದ್ಯಪಾಠ – ೦೬

# ಹರಲೀಲೆ

### [ನಡುಗನ್ನಡ ರಗಳೆ – ಗದ್ಯ]

– ಹರಿಹರ

**ಮುನ್ನುಯಾರಿ**

ಕವಿ ಹರಿಹರನು ನಿರ್ಮಿಸಿರುವ ಶಿವಗಣಪ್ರಪಂಚ ವಿಶಾಲವೂ ವೈವಿಧ್ಯಮಯವೂ ಆಗಿದೆ. ಶರಣರಲ್ಲಿ ಮುಗ್ಧರು, ಕವಿಗಳು, ವಿವಿಧ ವೃತ್ತಿಯವರು, ಜನಸಾಮಾನ್ಯರು ಇದ್ದಾರೆ. ಬಗೆಬಗೆಯಾಗಿ ದೇವಲೋಕ ಪ್ರವೇಶಿಸಿದವರಿದ್ದಾರೆ. ಮಾನವೀಯ ಪ್ರವೃತ್ತಿಗಳನ್ನು ಆಧ್ಯಾತ್ಮಿಕಕ್ಕೆ ತಿರುಗಿಸಿದ ದೃಷ್ಟಿ ಅವರಿಗೆಲ್ಲ ಸಾಮಾನ್ಯ ಅಂಶ. ಶಿವಶರಣರ ಬಾಳನ್ನು ಕವಿ ಉತ್ಸಾಹದಿಂದ ತಲ್ಲೀನತೆಯಿಂದ ವರ್ಣಿಸಿದ್ದಾನೆ. ಅವುಗಳಲ್ಲಿಯ ದರ್ಶನ ಮಾನವನ ಬದುಕಿಗೆ ದಾರಿದೀಪ. ಹರಿಹರನ ರಗಳೆಗಳಲ್ಲೆಲ್ಲ ಬಸವರಾಜದೇವರ ರಗಳೆ ಮತ್ತು ನಂಬಿಯಣ್ಣನ ರಗಳೆ ಮಹತ್ತ್ವದ ಕೃತಿಗಳು. ಶಿವನು ವೃದ್ಧವೇಷಧಾರಿಯಾಗಿ ಬಂದು ತನ್ನ ಭಕ್ತನಾದ ನಂಬಿಯಣ್ಣನನ್ನು ಇಕ್ಕಟ್ಟಿಗೆ ಸಿಲುಕಿಸಿದ ಕಥಾ ಸಂದರ್ಭ ಇಲ್ಲಿಯದು.

**ಅರ್ಥೈಸಿ–ಓದಿ**

| | | | | |
|---|---|---|---|---|
| ವಸುಧೆ | ವಿರೂಪಾಕ್ಷ | ಗಿರಿಜೆ | ಪುಷ್ಪದತ್ತ | ಚೋಳದೇಶ |
| ತಿರುವಾರೂರು | ಚಪ್ಪರ | ಖಟ್ವಾಂಗ | ಘಳಿಗೆವಟ್ಟಲು | ಗೌತಮನಗೋವ |
| ಬ್ರಹ್ಮೇತಿಕಾರ | ಕಾರಣಿಕ | ರುದ್ರಕನ್ನಿಕೆ | ಆಪಾದಮಸ್ತಕ | ಮೆಲ್ಲಮೆಲ್ಲನೆ |

**ನಿಗದಿತ ಮೂಲ ನಡುಗನ್ನಡ ರಗಳೆ – ಗದ್ಯ**

ಇಂತು ಮಣಮಂದ ಪುತ್ತೂರ್ಗೆ ನಡೆವುತ್ತಮಿರೆ
ಮುಂತೊರ್ವನೆಯ್ತಂದು ಬಿನ್ನಪವೆನುತ್ತಮಿರೆ।
ದೇವ ಲಗ್ನದ ಮುಹೂರ್ತಂ ಬರಂ ಬನದೊಳಗೆ
ದೇವ ಸುಖದಿಂದಿರ್ಪುದೀ ವೂರ ಬನದೊಳಗೆ।
ಎನೆ ತಿರುಗಿ ನಡೆದುದಾ ವನದತ್ತ ಮುಂತಾಗಿ
ತನತನಗೆ ಮುಯ್ಯಾನುತಾನಂದಮಯರಾಗಿ।

ಬಂದು ಬನಮಂ ಪೊಕ್ಕು ಮಿಕ್ಕು ಸಂತೋಷದಿಂ
ಮುಂದೆ ಸಿಂಹಾಸನವನಿಕ್ಕಲು ವಿಲಾಸದಿಂ–।
ದೆಸೆಯೆ ಕುಳ್ಳಿರ್ದನಾ ಸುಕುಮಾರ ಸೌಂದರಂ
ವಸುಧೆಗೊಪ್ಪುವ ಮರ್ತ್ಯಮಂಡಲಪುರಂದರಂ।



ಮುಗಿದಿರ್ದ ನೈದಿಲುಗೊಳಂಗಳಂ ನೋಡುತುಂ
ಮಿಗೆ ಬಳಲುವಾ ಚಕೋರಂಗಳಂ ಕಾಣುತುಂ।
ರಸಫಳಂಗಳನಱಿಸುತಿರ್ಪ ಶುಕನಿಕರಮಂ
ಪೊಸಪೂವನೆಳಸಿರ್ಪ ಮಧುಕರಪ್ರಕರಮಂ।

ನೋಡುತುಂ ಕೊಂಡಾಡುತಿರ್ದನಾ ವನದೊಳಗೆ
ಆಡಿಸುತೆ ಪಾಡಿಸುತಮಿರ್ದನಾ ವನದೊಳಗೆ।
ಇಂತು ಮುದದಿಂ ನಲಿವುತರಸುಮಗನೊಪ್ಪಿದಂ
ಸಂತತಂ ವನದೊಳಗೆ ಸುಕುಮಾರನೊಪ್ಪಿದಂ।



ವಿವಾಹತತ್ಪರನಾಗಿ ನಂಬಿಯಣ್ಣಂ ವನದೊಳಗಿರಲಿತ್ತಲು ಕೈಲಾಸಪುರದರಮನೆಯು ಲಪರಿಮಿತಪರಿವಾರನಾಗಿ ವಿರೂಪಾಕ್ಷನಿರ್ದು ಗಿರಿಜೆಗಿಂತೆಂದಂ – ದೇವಿ, ಕೇಳೌ, ನಮ್ಮ ಪುತ್ರಂ ಪುಷ್ಪದತ್ತಂ ನರಲೋಕದೊಳ್ ಪುಟ್ಟಿ, ನಂಬಿಯೆಂಬ ನಾಮವಾಗಿ, ಸಂಸಾರದಿಂ ಕೆಟ್ಟು ಪೋಗಲನುವಾಗಿರ್ದಪಂ. ಆತಂಗೆ ಮುನ್ನಿತ್ತ ನಂಬುಗೆಯ ಬೆಂಬಳಿಗೊಂಡು ಪೋಗಿ, ಮರ್ತ್ಯದೊಳ್ ತೊತ್ತುಗೊಂಡು ಆವು ಕಳುಪಿದ ನಿಮ್ಮಿರ್ಬರು ರುದ್ರಕನ್ನಿಕೆಯರು ಚೋಳದೇಶದ ತಿರುವಾರೂರೊಳಂ, ತಿರುವತ್ತಿಯೂರೊಳಂ ಪರವೆ ಸಂಕಿಲಿಗಳೆಂಬ ನಾಮದಿಂ ಜನಿಯಿಸಿರ್ದಪರವಂದಿರನಾತನೊಳ್ ನೆರಪಿ, ಸಕಲಸುಖಮಂ ಪೂಜೆಯಾಗಿ ಕೈಕೊಂಡು, ಬರ್ಪೆನೆನಲ್ ಆನುಂ ನಿಮ್ಮೊಡನೆ ನೋಡುತ್ತುಂ ಬಂದಪೆನೆಂದು ದೇವಿಯರ್ ಬಿನ್ನೈಸೆ, ನೀನತ್ಯಂತಕರುಣಿ ನಾಂ ಮಾಳ್ಪುದತಿನಿಷ್ಠುರಚರಿತ್ರಂ. ಆದೊಡಂ ನೀಂ ಬಂದು, ಆನಾವೂರೊಳಿರ್ದೆನೆನಲಲ್ಲಿಯ ದೇವಾಲಯದೊಳಿರುತೆ ಬರ್ಪುದೆಂದು ಕರುಣಿಸಿ, ವಿಚಿತ್ರಂ ಮತ್ತಂ ದೇವಿಯರ್ ನೋಡನೋಡಲೊರ್ವ ಶತವೃದ್ಧನಾಗಿ ನಿಂದಿರ್ದನೆಂತೆಂದೊಡೆ–

ಆಪಾದಮಸ್ತಕಪರ್ಯಂತರವುದ್ಧೂಳಿಸಿದ ವಿಭೂತಿಯ ತಲೆಯುಂ ಮಯ್ಯುಂ ನರೆತೆರೆಗಳಾಗೆ ಜೆಡೆಯ ಚಂದ್ರಕಳೆ ಕೊಡೆಯಾಗೆ, ಪಿಡಿದ ತ್ರಿಶೂಲಂ ಕೊಡೆಯ ಕಾವಾಗೆ, ಖಟ್ವಾಂಗಂ ಯಷ್ಟಿಯಾಗೆ, ಆಭರಣದೊಳೊಂದು ಸರ್ಪಂ ಪ್ರಮಾಣಪತ್ರಮಾಗೆ, ಕಮಲಜಶಿರಂ ಕಮಂಡಲಮಾಗೆ, ಪುಲಿದೊವಲ್ ಗಜಚರ್ಮಂ ಉಟ್ಟ ಪೊದೆದ ವೇಷ್ಟಿಗಳಾಗೆ, ಮೆಟ್ಟಿದ ನಾಗಾಸುರಂ ಪಾದರಕ್ಷೆಗಳಾಗೆ ಕಟ್ಟಿದ ಶಿರೋಮಾಲೆ ಜಪಮಾಲೆಯಾಗೆ, ಮಹಾವೃದ್ಧನಾಗಿ ಕೈಲಾಸದಿಂ ಚೋಳದೇಶದ ಮಣಮಂದಪುತ್ತೂರ ಮದುವೆಯ ಚಪ್ಪರದ ಮುಂದಿಳಿಪಿದಂತಿರ್ದಂ. ಕಯ್ಯ ಕೊಡೆಯಿಂ, ಮಯ್ಯತೆರೆಯಿಂ. ಜೋಲ್ವಪುರ್ವಿಂ, ನೇಲ್ವ ತೋಳತೊವಲಿಂ, ಇಟ್ಟ ವಿಭೂತಿಯಿಂ, ಊಱಿದ ಯಷ್ಟಿಯ ಕೋಲಿಂ, ಪಿಡಿದ ಕಮಂಡಲದಿಂಯಿಳಿದ ಬೆಳುಗಡ್ಡದಿಂ, ನಡುಗುವ ನರೆದಲೆಯಿಂ, ನರೆತು ಸಡಿಲ್ವ ಸರ್ವಾಂಗದಿಂ, ಪುಣ್ಯಂ ಪಣ್ಣಾದಂತೆ ಒಮ್ಮೊಮ್ಮೆ ಕೆಮ್ಮುತ್ತೊಮ್ಮೊಮ್ಮೆ ಗೊಹೆಗೊಹೆಗುಟ್ಟುತುಂ ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃಶಿವಾಯಯೆನುತ್ತೆನಲಾಱದಂತೆ ನಡುಗುತ್ತುಂ ಪೊಱಗೆ ನೆರೆದ ನೆರವಿಗಳೆಲ್ಲಂ ನೋಡುತ್ತಿರಲು ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡವರ್ ಪೊಗಲೀಯದಿರ್ದೊಡೆ ಅವಂದಿರಱಿಯದಂತೆ ಪೊಗುತಪ್ಪಾಗಳ್–

ವಿವಾಹಮಂಟಪಮಂ ಪೊಗುತಿರ್ಪ್ಪ ತಮ್ಮನಾರುವಱಿಯದೆ, ಕಾಣದೆ, ಲೆಕ್ಕಿಸದೆ ಸಂಭ್ರಮದೊಳಿರೆ, ಮೆಲ್ಲಮೆಲ್ಲನೆಲ್ಲವ ನೋಡುತುಂ, ಮನದೊಳ್ ನಗುತುಂ, ಕೋಲನೂಱುತೆ ಕೆಮ್ಮಿ ಕೆಮ್ಮುತ್ತೆ, ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃಶಿವಾಯಯೆಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳೊಳ್ ಮೇಲೊಡೆಬಿಳ್ದುಕುಳ್ತಿರ್ದರ ಮುಖದೊಳಂ, ಕಣ್ಣೊಳಂ, ಮಯ್ಯೊಳಂ ತುಪ್ಪಂ ಚೆಲ್ಲೆ ಎಲ್ಲರೆರ್ದುಮಲ್ಲಳಿಗೊಂಡು ಘೊಳ್ಳೆಂದು ಬಿಳ್ದ ವೃದ್ಧಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ ಮೆಲ್ಲನೆ ನೆಗಪಿ ನಿಂದಿರಿಸಲ್ ಒಂದೆರಡಡಿಯಿಟ್ಟು ದಡದಡಸಿ ನೋಡುವ ಜನವೆಲ್ಲಂ ಎಲೆಲೆ ವೃದ್ಧನಾಬಿದ್ದನೆಂಬಲ್ಲಿಂ ಮುನ್ನಂನಿಲಲಾಱದೆ ಹಳಿಲನೆ ಘಳಿಗೆವಟ್ಟಲ ಮೇಲೆ ಬೀಳೆ ಕಳಸಿಗೆಯೊಡೆದು ಘಳಿಗೆವಟ್ಟಲು ಮುಱಿದು ತಂಡುಲಂ ಚೆಲ್ಲಿ ಜೋಯಿಸರೆಲ್ಲಂ ಕೆದಱಿಪೋಗೆ, ಬಿದ್ದೇಳಲಾಱದೆ ಹಮ್ಮೈಸಿದಂತಿರೆ ಪರಿತಂದು ಕಣ್ಣೊಳಂ ಬಾಯೊಳಂ ನೀರಂ ತಳಿದೆಂತಕ್ಕೆಚ್ಚಱಿಸೆ ಎತ್ತುವರ ಕಯ್ಯ ಬಾಯೊಳೆ ಜೀವಂ ಹಿಡಿಯಬಾರದು ಮುಟ್ಟಬಾರದು ನೋಡಬಾರದು ನುಡಿಸಲರಿದು ಪಿಡಿದು ಬಿಟ್ಟಡೆ ತುಪ್ಪದ ಕೊಡನ ಮೇಲಲ್ಲದೆ ಬೀಳಂ. ಈ ವೃದ್ಧಬ್ರಾಹ್ಮಣನನೀ ಮುಪ್ಪಿನ ಮರುಳನನೀ ಗೌತಮನ ಗೋವನೀ ಬ್ರಹ್ಮೇತಿಕಾಱನನಾರ್ ಪೊಗಿಸಿದರಾರ್ ತಂದರ್. ಇದೆ ಅವಶಕುನವಿನ್ನೇನೀ ಮದುವೆ ಹಸನಾಗದೆನುತ್ತೆಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದೆತ್ತಿಕೊಂಡು ಪೋಗಿ ತಮ್ಮಾಯುಷ್ಯ ಭಾಷೆಗಳಂ ಪೊಱಗಿಡುವಂತೆ ಚಪ್ಪರದವೊಱಗೆ ಮೆಲ್ಲನಿಳುಪಿ ಈತನಂ ಪೊಗಲೀಯದಿರೀವೃದ್ಧನಂ ಪೊಗಿಸದಿರೆಂದು ಬಾಗಿಲವನನದುಹುತ್ತೆ ಕದವನಿಕ್ಕಿ ಒಳಗಂ ಪೊಗುವ್ವೆಸಕ್ಕೆ ಅವರಿಂ ಮುನ್ನವೆಯ್ತಂದೊಳಗಂ ಪೊಕ್ಕು ತೋರಣದ ತಳಿರಂ ಪಱಿದು ಶಿವದಿಡುತ್ತಿರಲ್ ಅವರ್ ಕಂಡು ಬೆಱಗಾಗಿ ಈಗಳಿಂತು ಪೊಱಗಿರಿಸಲಾಗಳಂತೆ ಬಂದು ಮುಂದಿರ್ದಪನೀ ವೃದ್ಧಂ ಕಿಱುಕುಳನಲ್ಲ ಕಾರಣಿಕನಾಗಲೆವೇಳ್ಕುಮೆಂದು ನೋಡುತಿರ್ದರ್.

**ಪದವಿಂಗಡಣಾ ಓದು**

ಇಂತು ಮಣಮಂದ ಪುತ್ತೂರ್ಗೆ ನಡೆವುತ್ತುಮ್ +ಇರೆ ಮುಂತೆ + ಒರ್ವನ್ + ಎಯ್ತಂದು ಬಿನ್ನಪ + ಎನುತ್ತಮ್ + ಇರೆ ದೇವ ಲಗ್ನದ ಮುಹೂರ್ತಂ ಬರಂ ಬನದ + ಒಳಗೆ ದೇವ

ಸುಖದಿಂದ + ಇರ್ಪುದು ಈ + ಊರ ಬನದ + ಒಳಗೆ ಎನೆ ತಿರುಗಿ ನಡೆದುದು + ಆ ವನದತ್ತ ಮುಂತಾಗಿ ತನತನಗೆ ಮುಯ್ಯಾನುತ + ಆನಂದ ಮಯರ್ + ಆಗಿ ಬಂದು ಬನಮಂ ಪೊಕ್ಕು ಮಿಕ್ಕು ಸಂತೋಷದಿಂ ಮುಂದೆ ಸಿಂಹಾಸನವನು + ಇಕ್ಕಲು ವಿಲಾಸದಿಂದ+ ಎಸೆಯೆ ಕುಳ್ಳಿರ್ದನು + ಆ ಸುಕುಮಾರ ಸೌಂದರಂ ವಸುಧೆಗೆ + ಒಪ್ಪುವ ಮರ್ತ್ಯಮಂಡಲ ಪುರಂದರಂ ಮುಗಿದು + ಇರ್ದ ನೈದಿಲು + ಕೊಳಂಗಳಂ ನೋಡುತುಂ ಮಿಗೆ ಬಳಲುವ + ಆ ಚಕೋರಂಗಳಂ ಕಾಣುತುಂ ರಸಫಳಂಗಳನ್ + ಅಱ[ರ]ುತ + ಇರ್ಪ ಮಧುಕರ ಪ್ರಕರಮಮ್ ನೋಡುತುಂ ಕೊಂಡಾಡುತ + ಇರ್ದನ್ + ಆ ವನದೊಳಗೆ ಆಡಿಸುತೆ ಪಾಡಿಸುತಮ್ + ಇರ್ದನ್ + ಆ ವನದೊಳಗೆ ಇಂತು ಮುದದಿಂ ನಲಿವುತ + ಅರಸು ಮಗನ್ + ಒಪ್ಪಿದಂ ಸಂತತಂ ವನದೊಳಗೆ ಸುಕುಮಾರನ್ + ಒಪ್ಪಿದಂ

ವಿವಾಹ ತತ್ + ಪರನಾಗಿ ನಂಬಿಯಣ್ಣಂ ವನದ + ಒಳಗೆ + ಇರಲ್ + ಇತ್ತಲು ಕೈಲಾಸಪುರದ+ ಅರಮನೆಯಲ್ + ಅಪರಿಮಿತ ಪರಿವಾರನಾಗಿ ವಿರೂಪಾಕ್ಷನ್ + ಇರ್ದು ಗಿರಿಜೆಗೆ + ಇಂತು + ಎಂದಂ ದೇವಿ ಕೇಳೌ ನಮ್ಮ ಪುತ್ರಂ ಪುಷ್ಪದತ್ತಂ ನರಲೋಕದೊಳ್ ಪುಟ್ಟಿ ನಂಬಿ + ಎಂಬ ನಾಮವಾಗಿ ಸಂಸಾರದಿಂ ಕೆಟ್ಟುಪೋಗಲ್ ಅನುವಾಗಿ + ಇರ್ದಪಂ ಆತಂಗೆ ಮುನ್ನ + ಇತ್ತ ನಂಬುಗೆಯ ಬೆನ್ + ಬಳಿ + ಕೊಂಡು ಪೋಗಿ ಮರ್ತ್ಯದೊಳ್ ತೊತ್ತು + ಕೊಂಡು ಆವು ಕಳುಪಿದ ನಿಮ್ಮ + ಇರ್ಬರು ರುದ್ರಕನ್ನಿಕೆಯರು ಚೋಳದೇಶದ ತಿರುವಾರೂರ್ + ಒಳಂ ತಿರುವತ್ತಿ + ಊರೊಳಂ ಪರವೆ ಸಂಕಿಲಿಗಳ್+ ಎಂಬ ನಾಮದಿಂ ಜನಿಯಿಸಿ + ಇರ್ದಪರ್ + ಅವಂದಿರನ್ + ಆತನೊಳ್ ನೆರಪಿ ಸಕಲ ಸುಖಮಂ ಪೂಜೆ + ಆಗಿ ಕೈಕೊಂಡು ಬರ್ಪೆನ್ + ಎನಲ್ ಆನುಂ ನಿಮ್ಮ + ಒಡನೆ ನೋಡುತ್ತುಂ ಬಂದಪೆನ್ + ಎಂದು ದೇವಿಯರ್ ಬಿನ್ನೈಸೆ ನೀನ್ + ಅತಿ + ಅಂತ ಕರುಣಿ. ನಾಂ ಮಾಳ್ಪುದು + ಅತಿ + ನಿಷ್ಠುರ ಚರಿತ್ರಂ ಆದೊಡಂ ನೀಂ ಬಂದು ಆನ್ + ಆವ + ಊರೊಳ್ + ಇರ್ದೆನ್ + ಎನಲ್ + ಅಲ್ಲಿಯ ದೇವಾಲಯದೊಳ್ + ಇರುತೆ ಬರ್ಪುದು ಎಂದು ಕರುಣಿಸಿ ವಿಚಿತ್ರಂ ಮತ್ತಂ ದೇವಿಯರ್ ನೋಡನೋಡಲ್ + ಒರ್ವ ಶತವೃದ್ಧನ್ + ಆಗಿ ನಿಂದು + ಇರ್ದನ್ + ಎಂತು + ಎಂದೊಡೆ.

ಆಪಾದಮಸ್ತಕ ಪರ್ಯಂತರ + ಉದ್ಧೂಳಿಸಿದ ವಿಭೂತಿಯು ತಲೆಯುಂ ಮುಯ್ಯುಂ ನರೆತೆರೆಗಳ್ + ಆಗೆ ಜೆಡೆಯ + ಚಂದ್ರಕಳೆ ಕೊಡೆಯಾಗೆ ಪಿಡಿದ ತ್ರಿಶೂಲಂ ಕೊಡೆಯ ಕಾವಾಗೆ ಖಟ್ವಾಂಗಂ ಯಷ್ಟಿಯಾಗೆ ಆಭರಣದೊಳ್ + ಒಂದು ಸರ್ಪಂ ಪ್ರಮಾಣ ಪತ್ರಂ + ಆಗೆ ಕಮಲಜ ಶಿರಂ ಕಮಂಡಲಮ್ + ಆಗೆ ಪುಲಿ + ತೊವಲ್ ಗಜಚರ್ಮಂ ಉಟ್ಟ ಹೊದೆದ ವೇಷ್ಟಿಗಳ್ + ಆಗೆ ಮೆಟ್ಟಿದ ನಾಗಾಸುರಂ ಪಾದರಕ್ಷೆಗಳ್ + ಆಗೆ ಕಟ್ಟಿದ ಶಿರೋಮಾಲೆ ಜಪಮಾಲೆಯಾಗೆ ಮಹಾವೃದ್ಧನ್ + ಆಗಿ ಕೈಲಾಸದಿಂ ಚೋಳದೇಶದ ಮಣಮಂದಪುತ್ತೂರ ಮದುವೆಯ ಚಪ್ಪರದ ಮುಂದೆ+ಇಳಿಹಿದಂತೆ ಇರ್ದಂ. ಕಯ್ಯ ಕೊಡೆಯಿಂ ಮಯ್ಯತೆರೆಯಿಂ ಜೋಲ್ವ ಪುರ್ವಿಂ ನೇಲ್ವ ತೋಳ ತೊವಲಿಂ ಇಟ್ಟ ವಿಭೂತಿಯಿಂ ಊಱ[ರಿ]ದ ಯಷ್ಟಿಯ ಕೋಲಿಂ ಪಿಡಿದ ಕಮಂಡಲದಿಂ + ಇಳಿದ ಬೆಳು + ಗಡ್ಡದಿಂ ನಡುಗುವ ನರೆ+

ತಲೆಯಿಂ ನರೆತು ಸಡಿಲ್ವ ಸರ್ವ+ಅಂಗದಿಂ ಪುಣ್ಯಂ ಪಣ್ಣ್ + ಆದಂತೆ ಒಮ್ಮೆ + ಒಮ್ಮೆ ಕೆಮ್ಮುತ + ಒಮ್ಮೆ + ಒಮ್ಮೆ ಗೊಹೆಗೊಹೆ ಗುಟ್ಟುತುಂ ಶಿಥಿಲ + ಅಕ್ಷರಂಗಳಿಂ ನಮಃಶಿವಾಯ ನಮಃಶಿವಾಯ + ಎನುತ್ತ + ಎನಲ್ + ಆಱ[ರ]ದಂತೆ ನಡುಗುತ್ತುಂ ಹೊಱ[ರ]ಗೆ ನೆರೆದ ನೆರವಿಗಳ್ + ಎಲ್ಲಂ ನೋಡುತ್ತಿರಲು ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ + ಅವರ್ ಪೊಗಲ್ + ಈಯದೆ + ಇರ್ದೊಡೆ ಅವಂದಿರ್ + ಅಜೆ[ರಿ]ಯದಂತೆ + ಪೊಗುತಪ್ಪ + ಆಗಳ್.

ವಿವಾಹಮಂಟಪಮಂ + ಪೊಗುತ+ಇರ್ಪ ತಮ್ಮನ್ + ಆರು + ಅಜೆ[ರಿ]ಯದೆ ಕಾಣದೆ ಲೆಕ್ಕಿಸದೆ ಸಂಭ್ರಮದೊಳ್+ಇರೆ ಮೆಲ್ಲಮೆಲ್ಲನೆ + ಎಲ್ಲವ ನೋಡುತುಂ ಮನದೊಳ್ ನಗುತುಂ ಕೋಲನ್ + ಊಱು[ರು]ತೆ ಕೆಮ್ಮಿಕೆಮ್ಮುತ್ತೆ ಸಾಲ್ + ಕೊಂಡು + ಇರ್ದ ತುಪ್ಪದ ಕೊಡಂಗಳೊಳ್ ನಾಲ್ಕು + ಎರಡನ್ + ಎಡಹಿ ನಮಃಶಿವಾಯ+ಎಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳ ಮೇಲ್ + ಒಡೆಬಿಳ್ದು ಕುಳ್ಳಿರ್ದರ ಮುಖದೊಳಂ ಕಣ್ಣೊಳಂ ಮಯ್ಯೊಳಂ ತುಪ್ಪಂ ಚೆಲ್ಲೆ ಎಲ್ಲರ್ + ಎರ್ದು + ಮಲ್ಲಳಿ + ಕೊಂಡು ಘೊಳ್ಳೆಂದು ಬಿಳ್ದ ವೃದ್ಧ ಮಾಹೇಶ್ವರನಂ ಮುತ್ತಿಕೊಂಡು + ಎತ್ತಲ್ + ಅನುವಾಗಿ ಮೆಲ್ಲನೆ ನೆಗಪಿ ನಿಂದು+ ಇರಿಸಲ್ ಒಂದು + ಎರಡು + ಅಡಿ + ಇಟ್ಟು ದಡದಡಿಸಿ ನೋಡುವ ಜನ +ಎಲ್ಲಂ ಎಲೆ + ಎಲೆ ವೃದ್ಧನ್ + ಬಿದ್ದನ್ + ಎಂಬಲ್ಲಿಂ ಮುನ್ನಂ ನಿಲಲ್ + ಆಱ[ರ]ದೆ ಹಳಿಲ್ + ಎನೆ ಘಳಿಗೆ + ಬಟ್ಟಲ ಮೇಲೆ ಬೀಳೆ ಕಳಸಿಗೆ + ಒಡೆದು ಘಳಿಗೆ + ಬಟ್ಟಲು ಮುಜೆ[ರಿ]ದು ತಂಡುಲಂ ಚೆಲ್ಲಿ ಜೋಯಿಸರ್ + ಎಲ್ಲಂ ಕೆದಜೆ[ರಿ]ಪೋಗೆ ಬಿದ್ದು + ಏಳಲಾಱ[ರ]ದೆ ಹಮ್ಮೈಸಿದಂತೆ + ಇರೆ ಪರಿತಂದು ಕಣ್ಣೊಳಂ ಬಾಯೊಳಂ ನೀರಂ + ತಳಿದು + ಎಂತಕ್ಕೆ + ಎಚ್ಚಜೆ[ರಿ]ಸೆ ಎತ್ತುವರ ಕಯ್ಯ ಬಾಯೊಳೆ ಜೀವಂ ಹಿಡಿಯಬಾರದು ಮುಟ್ಟಬಾರದು ನೋಡಬಾರದು ನುಡಿಸಲ್ + ಅರಿದು ಪಿಡಿದು ಬಿಟ್ಟಡೆ ತುಪ್ಪದ ಕೊಡನ ಮೇಲ್ + ಅಲ್ಲದೆ ಬೀಳಂ– ಈ ವೃದ್ಧ ಬ್ರಾಹ್ಮಣನನ್ + ಈ ಮುಪ್ಪಿನ ಮರುಳನನ್ + ಈ ಗೌತಮನ ಗೋವನ್ + ಈ ಬ್ರಹ್ಮೇತಿಕಾಱ[ರ]ನನ್ + ಆರ್ ಪೊಗಿಸಿದರ್ + ಆರ್ ತಂದರ್–ಇದೆ ಅವಶಕುನ ಇನ್ನು + ಏನ್ + ಈ ಮದುವೆ ಹಸನಾಗದು + ಎನುತ್ತ + ಎಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದು + ಎತ್ತಿಕೊಂಡು ಪೋಗಿ ತಮ್ಮ + ಆಯುಷ್ಯಭಾಷೆಗಳಂ ಪೊಱ[ರ]ಗೆ + ಇಡುವಂತೆ ಚಪ್ಪರದ ಪೊಱ[ರ]ಗೆ ಮೆಲ್ಲನೆ + ಇಳುಪಿ ಈ ವಿಪ್ರನಂ ಪೊಗಲ್ + ಈಯದಿರಿ + ಈ + ವೃದ್ಧನಂ ಪೊಗಿಸದಿರಿ + ಎಂದು ಬಾಗಿಲ + ಅವನನ್ + ಅದುಹುತ್ತೆ ಕದವನ್ + ಇಕ್ಕಿ ಒಳಗಂ ಪೊಗುವ + ಐಸಕ್ಕೆ ಅವರಿಂ ಮುನ್ನಂ + ಎಯ್ತಂದು + ಒಳಗಂ ಪೊಕ್ಕು ತೋರಣದ ತಳಿರಂ ಪಜೆ[ರಿ]ದು ಶಿವದಿಡುತ್ತ + ಇರಲ್– ಅವರ್ ಕಂಡು ಬೆಱ[ರ]ಗಾಗಿ ಈಗಳ್ + ಇಂತು ಪೆ

**ಪೂರ್ವಕತೆ :**

ಕೈಲಾಸದಲ್ಲಿರುವ ಉದ್ಯಾನವನದಲ್ಲಿ ಇಬ್ಬರು ರುದ್ರಕನ್ನಿಕೆಯರು ಹೂ ಬಿಡಿಸುತ್ತಿದ್ದರು. ಇದನ್ನು ರುದ್ರಗಣದ ಸದಸ್ಯರಲ್ಲೊಬ್ಬನಾದ ಪುಷ್ಪದತ್ತ ಗಮನಿಸಿ ಅವರನ್ನು ಅನುರಾಗ ಭಾವದಿಂದ ನೋಡಿದನು. ಪುಷ್ಪದತ್ತನನ್ನು ಕಂಡ ರುದ್ರಕನ್ನಿಕೆಯರೂ ಅವನನ್ನು ಅದೇ ಭಾವದಿಂದ ನೋಡುತ್ತಿರುವುದನ್ನು ಶಿವ

ಗಮನಿಸಿದ ಮತ್ತು ಅಸಮಾಧಾನ ಹೊಂದಿದ. ಕೈಲಾಸದಲ್ಲಿ ಗಣಗಳು ಇಂತಹ ವಿಕಾರಭಾವನೆಗಳನ್ನು ಹೊಂದಿರುವುದು ಅಪರಾಧ. ಹಾಗಾಗಿ ಶಿವನು ಈ ಮೂವರಿಗೂ ಇಹಲೋಕದಲ್ಲಿ ಮನುಜರಾಗಿ ಹುಟ್ಟಿ ಎಂದು ಶಪಿಸಿದನು. ಇದರಿಂದ ನೊಂದ ಪುಷ್ಪದತ್ತ "ನಿಮ್ಮನ್ನಗಲಿ ನಾನಿರಲಾರೆ, ದಯವಿಟ್ಟು ನನ್ನ ತಪ್ಪನ್ನು ಮನ್ನಿಸಿ" ಎಂದು ಪ್ರಾರ್ಥಿಸಲು, ನೀನು ಈಗ ಭೂಲೋಕದಲ್ಲಿ ಮಾನವನಾಗಿ ಹುಟ್ಟು, ಆದಷ್ಟು ಬೇಗನೆ ನಿನ್ನನ್ನು ಕೈಲಾಸಕ್ಕೆ ಕರೆಸಿಕೊಳ್ಳುವೆನೆಂದು ಆಶ್ವಾಸನೆ ನೀಡಿದ. ಹೀಗಾಗಿ ಚೋಳದೇಶದ ರಾಜಮನೆತನದಲ್ಲಿ ನಂಬಿಯಣ್ಣನಾಗಿ ಪುಷ್ಪದತ್ತನೂ ಪರವೆ-ಸಂಕಿಲಿಯರಾಗಿ ರುದ್ರಕನ್ನಿಕೆಯರೂ ಹುಟ್ಟಿದರು.

## ಕರ್ತೃ – ಭಾವ – ಆಕರ

**ಹರಿಹರನ** ಕಾಲ ಸುಮಾರು ಕ್ರಿಸ್ತ ಶಕ ೧೨೦೦. ಈತನ ಸ್ಥಳ **ಹಂಪೆ. ಹಂಪೆಯ ವಿರೂಪಾಕ್ಷ** ಈತನ **ಆರಾಧ್ಯದೈವ.** ಕನ್ನಡ ಸಾಹಿತ್ಯದಲ್ಲಿ ರಗಳೆ ಕಾವ್ಯಪ್ರಕಾರವನ್ನು ಜೀವಂತಗೊಳಿಸಿದ ಸುಪ್ರಸಿದ್ಧ ಕವಿ. **ಗಿರಿಜಾಕಲ್ಯಾಣ** ಪ್ರೌಢಚಂಪೂಪರಂಪರೆಯಲ್ಲಿ ರಚಿತವಾಗಿರುವ ಕಾವ್ಯ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹತ್ತ್ವದ ಸ್ಥಾನಗಳಿಸಿರುವುದು ರಗಳೆ ಕಾವ್ಯದ ಮೂಲಕ. ಶಿವಶರಣರನ್ನು ಸ್ತುತಿಸಲು ಮಾತ್ರ ಕಾವ್ಯಶಕ್ತಿಯನ್ನು ಬಳಸಬೇಕಲ್ಲದೆ ಮಾನವರಿಗಾಗಿ ಅಲ್ಲವೆಂಬ ಸಂಪ್ರದಾಯವನ್ನು ಕನ್ನಡ ಸಾಹಿತ್ಯದಲ್ಲಿ ರೂಢಿಗೆ ತಂದ. ಕನ್ನಡ ಸಾಹಿತ್ಯದಲ್ಲಿ ಪ್ರಧಾನವಾಗಿದ್ದ ಚಂಪೂಕಾವ್ಯಪರಂಪರೆಯನ್ನು ಹಿಂದೆ ಸರಿಸಿ ರಗಳೆಗಳಲ್ಲಿ ಕಾವ್ಯರಚಿಸುವ ಹೊಸಸಂಪ್ರದಾಯಕ್ಕೆ ನಾಂದಿ ಹಾಡಿದ. **ದೇವರದಾಸಿಮಯ್ಯ, ಪ್ರಭುದೇವ, ಬಸವಣ್ಣ, ಅಕ್ಕಮಹಾದೇವಿ, ಗುಂಡಯ್ಯ, ಮಾದರಚನ್ನಯ್ಯ** ಮುಂತಾದ ಶಿವಶರಣರನ್ನು ಕುರಿತ ರಗಳೆಗಳನ್ನಲ್ಲದೆ ಪುಷ್ಪರಗಳೆಯನ್ನೂ ರಚಿಸಿದ್ದಾನೆ. ಪಾದಗಳ ನಿರ್ಬಂಧವಿಲ್ಲದ ಈ ರಗಳೆಗಳಲ್ಲಿ ಕಥಾನಿರೂಪಣೆ ನಿರರ್ಗಳವಾಗಿ ಸಾಗುತ್ತದೆ. ರಗಳೆ ಕವಿಯೆಂದೇ ಪ್ರಸಿದ್ಧನಾಗಿರುವ ಈತನ ಕೃತಿಗಳಲ್ಲಿ ಕೆಲವು ಸ್ಥಲಗಳು ಪೂರ್ತಿಯಾಗಿ ಗದ್ಯದಲ್ಲಿದ್ದು ಭಕ್ತಿಭಾವ ಉತ್ಕಟವಾಗಿ ಮೂಡಿಬಂದಿವೆ.



* * * *

ವೃದ್ಧಮಾಹೇಶ್ವರ ಸ್ಥಲದ ವೃದ್ಧನ ವರ್ಣನೆ, ನಡೆನುಡಿ, ಹಾವಭಾವಗಳು ಸಹೃದಯನ ಮನಸ್ಸಿಗೆ ಮುದ ನೀಡುತ್ತವೆ. ತನ್ನ ಅಭಿನಯಚಾತುರ್ಯ ಹಾಗೂ ನಟನಾ ಸಾಮರ್ಥ್ಯವನ್ನು ನೋಡಲು ಜಗನ್ಮಾತೆಯಾದ ಗಿರಿಜೆ ಊರ ಮುಂದಿನ ಮಂದಿರದಲ್ಲಿ ನೆಲೆಸಿರುವುದನ್ನರಿತ ನಟವರಗಂಗಾಧರ, ಭಕ್ತ ಉದ್ಧಾರಕ ಸೊಗಸಾದ ನಟನೆಯನ್ನು ಮಾಡುತ್ತಾನೆ. ಹರಿಹರನ ಕೈಯಲ್ಲಿ ಪದಗಳು ಅದೆಷ್ಟು ಚೆನ್ನಾಗಿ ನರ್ತಿಸುತ್ತವೆ ಎಂಬುದನ್ನರಿಯಲು ಇಡೀ ಕಾವ್ಯವನ್ನು ಮೆಲುಕು ಹಾಕಬೇಕು. ಶಿವನೃತ್ಯವನ್ನು ನೋಡಿದ ಶರಣರು ಮತ್ತೊಮ್ಮೆ ಕಾಣಲು ಕಾತರಿಸುವಂತೆ ಇಡೀ ಕಾವ್ಯವನ್ನು ಮತ್ತೊಮ್ಮೆ ಮಗದೊಮ್ಮೆ ಓದಬೇಕೆನಿಸುತ್ತದೆ. ನಂಬಿಯಣ್ಣನ ರಗಳೆಯಲ್ಲಿನ **ವೃದ್ಧಮಾಹೇಶ್ವರನ** ಅಭಿನಯ ಸಹೃದಯರಲ್ಲಿ ಹಾಸ್ಯದ ಹೊನಲನ್ನು ಹರಿಸುತ್ತದೆ.

* * * *

**ಹರಿಹರನ ನಂಬಿಯಣ್ಣನರಗಳೆಯಿಂದ ಹರಲೀಲೆ** ಪಾಠವನ್ನು ಆಯ್ದುಕೊಂಡಿದೆ. ಈ ಕೃತಿಯನ್ನು **ತೀ.ನಂ. ಶ್ರೀಕಂಠಯ್ಯ**ನವರು ಸಂಪಾದಿಸಿದ್ದು ಮೈಸೂರಿನ ಕಾವ್ಯಾಲಯ ಪ್ರಕಾಶನವು ಹೊರತಂದಿದೆ.

## ಪದ-ಪದ್ಯ-ಗದ್ಯಾರ್ಥ

ಒರ್ವನೆ-ಒಬ್ಬನೆ; ಎಯ್ತಂದು-ಬಂದು; ಬಿನ್ನಪ(ದ್ಭ)-ವಿಜ್ಞಾಪನೆ (ತ್ಸ) ; ಇರೆ-ಇರಲು; ಬನ(ದ್ಭ)-ವನ(ತ್ಸ); ವಸುಧೆ-ಭೂಮಿ ; ಮರ್ತ್ಯಮಂಡಲ - ಭೂಲೋಕ; ಅಱ[ರ]ಸು-ಹುಡುಕು; ಶುಕ-ಗಿಳಿ; ನಿಕರ-ಸಮೂಹ; ಎಳಸಿರ್ಪ-ಸುತ್ತುವರಿದಿರುವ;

ತತ್ಪರ-ಆಸಕ್ತ; ಅಪರಿಮಿತ-ಪರಿಮಿತವಲ್ಲದ, ಮಿತಿಯಿಲ್ಲದ; ಪರಿವಾರ-ಸುತ್ತುಮುತ್ತಲಜನ; ಅನುವಾಗು-ಸಿದ್ಧನಾಗು; ಬೆಂಬಳಿಗೊಂಡು-ಹಿಂಬಾಲಿಸಿ ; ಮರ್ತ್ಯ - ಭೂಮಿ ; ತೊತ್ತುಗೊಂಡು-ಸೇವಕನನ್ನಾಗಿ ಮಾಡಿಕೊಂಡು ; ಆವು-ನಾವು; ನೆರಪಿ-ಸೇರಿಸಿ ; ಬಿನ್ನೈಸು-ನಿವೇದಿಸು, ವಿಜ್ಞಾಪಿಸು; ಚರಿತ್ರಂ-ಕೆಲಸ ; ಶತವೃದ್ಧ-ನೂರುವರ್ಷ ತುಂಬಿದ ಮುದುಕ ; ಆಪಾದ ಮಸ್ತಕ ಪರ್ಯಂತರ-ಪಾದದಿಂದ ತಲೆಯವರೆಗೆ ; ಉದ್ಧೂಳಿಸು-ಲೇಪಿಸು ; ನರೆ-ಮುಪ್ಪಿನಿಂದ ಬರುವ ಬಿಳಿಕೂದಲು; ತೆರೆ-ಮುಪ್ಪಿನಿಂದಾಗಿ ಸುಕ್ಕುಗಟ್ಟಿದ ಚರ್ಮ ; ಖಟ್ವಾಂಗ - ತುದಿಯಲ್ಲಿ ತಲೆಬುರುಡೆಯುಳ್ಳ ಶಿವನ ಗದೆ ; ಯಷ್ಟಿ - ಊರುಗೋಲು ; ಕಮಲಜ - ಬ್ರಹ್ಮ ; ತೊವಲ್ - ಚರ್ಮ ; ಗಜ - ಆನೆ ; ವೇಷ್ಟಿ-ಪಂಚೆ; ಜೋಲ್ವ - ಸಡಿಲವಾಗಿರುವ ; ಪುರ್ವು - ಹುಬ್ಬು ; ನೇಲ್ವ-ನೇತಾಡುವ ; ಬೆಳು - ಬಿಳಿ ; ಗೊಹೆಗೊಹೆಗುಟ್ಟು- ಗೊರ್‌ಗೊರ್ ಎಂದು ಶಬ್ದ ಮಾಡು ; ಶಿಥಿಲಾಕ್ಷರ - ತೊದಲು ಮಾತು ; ನೆರವಿ-ಸೇರಿದ ಜನ ; ಈಯದೆ-ಬಿಡದೆ; ಅವಂದಿರ್-ಅವರು ; ಪೊಗುತಪ್ಪಾಗಳ್ - ಹೊಕ್ಕಿದಾಗ ; ಮಲ್ಲಳಿಗೊಂಡು - ಗುಂಪು ಗೂಡಿ ; ನೆಗಪಿ - ಎತ್ತಿ ; ಘಳಿಗೆವಟ್ಟಲು - ಘಳಿಗೆಯನ್ನು ಸೂಚಿಸುವಬಟ್ಟಲು ; ತಂಡುಲ-ಅಕ್ಕಿ ; ಹಮ್ಮೈಸು-ಮೈಮರೆ, ಮೂರ್ಛೆಹೋಗು ; ಗೌತಮನಗೋವು - ಬಡಕಲಾದ ಗೋವು ; ಬ್ರಹ್ಮೇತಿಕಾಱ - ಬ್ರಾಹ್ಮಣನನ್ನು ಕೊಂದವ ; ಪೊಗಿಸು-ಹೊಕ್ಕಿಸು ; ಅದುಹು - ಸಂಶಯ ಪಡು ; ಐಸಕ್ಕೆ-ಅಷ್ಟಕ್ಕೆ, ಅಷ್ಟು ಹೊತ್ತಿಗೆ ; ಶಿವದಿಡು - ಶಿವಾ ಎಂದು ಕೂಗು ; ಕಾರಣಿಕ - ಅಸಾಧರಣ ಪುರುಷ.



## ಪಠ್ಯಾಧಾರ ಟಿಪ್ಪಣಿ

**ವಿರೂಪಾಕ್ಷ** : ಶಿವನ ಮತ್ತೊಂದು ಹೆಸರು. ಹಂಪೆಯಲ್ಲಿರುವ ವಿರೂಪಾಕ್ಷ ಹರಿಹರನ ಆರಾಧ್ಯ ದೈವ.

**ಪುಷ್ಪದತ್ತ** : ನಂಬಿಯಣ್ಣನ ಪೂರ್ವಜನ್ಮದ ಹೆಸರು. ಈತನು ಶರಣ ನಡೆವಳಿಕೆಗೆ ಅಪಚಾರವೆಂಬಂತೆ ರುದ್ರಕನ್ನಿಕೆಯರನ್ನುಮೋಹದ ದೃಷ್ಟಿಯಿಂದ ನೋಡಿದ್ದರಿಂದ ಮಾನವನಾಗಿ ಭೂಲೋಕದಲ್ಲಿ ಹುಟ್ಟಿ ಕಷ್ಟಕೋಟಲೆಗಳನ್ನು ಅನುಭವಿಸಬೇಕಾಯಿತು.

**ಪರವೆ-ಸಂಕಿಲಿ** : ಇವರಿಬ್ಬರು ಪೂರ್ವಜನ್ಮದಲ್ಲಿ ಕೈಲಾಸದ ರುದ್ರಕನ್ನಿಕೆಯರಾಗಿದ್ದರು. ಅಲ್ಲಿದ್ದ ಇವರ ಮನಸ್ಸು ಮೋಹಕ್ಕೆ ಒಳಗಾದುದರಿಂದ ಮೋಹದ ಮಾಯೆಯನ್ನು ಕಳೆದುಕೊಳ್ಳಲು ಮಾನವರಾಗಿ ಹುಟ್ಟಿರೆಂದು ಶಿವನ ಶಾಪಕ್ಕೆ ಗುರಿಯಾದವರು.

**ಮಣಮಂದಪುತ್ತೂರು** : ಚೋಳ ದೇಶದ ಒಂದು ಗ್ರಾಮ. ಇಲ್ಲಿ ನಂಬಿಯಣ್ಣನ ಮದುವೆಗೆ ಏರ್ಪಾಡು ಮಾಡಲಾಗಿತ್ತು. ವೃದ್ಧ ವೇಷಧಾರಿಯಾಗಿ ಬಂದ ಮಾಹೇಶ್ವರ ವ್ಯವಸ್ಥೆಯನ್ನೆಲ್ಲ ಅವ್ಯವಸ್ಥೆಯನ್ನಾಗಿ ಮಾಡಿದ.

**ಜೋಯಿಸ** : ಜ್ಯೋತಿಶ್ಶಾಸ್ತ್ರ ತಿಳಿದವನು. ಶಾಸ್ತ್ರ ಗ್ರಂಥಗಳನ್ನು ಮನನ ಮಾಡಿಕೊಂಡು ಸಂಪ್ರದಾಯಕ್ಕೆ ಚ್ಯುತಿಬಾರದಂತೆ ಬದುಕನ್ನು ಸಾಗಿಸುವ ಧಾರ್ಮಿಕ ಮುಂದಾಳು.

**ಕಾರಣಿಕ** : ಯಾವುದೋ ಒಂದು ತಪ್ಪಿಗಾಗಿ ಶಿವನ ಅವಕೃಪೆಗೆ ಒಳಗಾಗಿ, ಭೂಲೋಕಕ್ಕೆ ಬಂದು ಅನಂತರ ಕೈಲಾಸದ ಶಿವ ಗಣಪರಿವಾರದಲ್ಲಿ ಸೇರುವವನೇ ಕಾರಣಿಕ, ಅವತಾರ ಪುರುಷ.

ಘಳಿಗೆವಟ್ಟಲು : ಘಳಿಗೆ ಬಟ್ಟಲು – ಒಂದು ದಿನಕ್ಕೆ (ರಾತ್ರಿ ಸೇರಿ) ೬೦ ಘಳಿಗೆ. ಒಂದು ಘಳಿಗೆಯನ್ನು ಅಳೆಯಲು ಈ ಬಟ್ಟಲನ್ನು ಬಳಸುತ್ತಿದ್ದರು. ಒಂದು ನಿರ್ದಿಷ್ಟ ಗಾತ್ರದ ಬಟ್ಟಲಿಗೆ ತಳದಲ್ಲಿ ನಿರ್ದಿಷ್ಟ ಗಾತ್ರದ ರಂಧ್ರವನ್ನು ಮಾಡಿ ಇನ್ನೊಂದು (ಅದಕ್ಕಿಂತ ದೊಡ್ಡದು) ಬಟ್ಟಲ ಮೇಲೆ ಇಟ್ಟು ತೂತು ಮಾಡಿರುವ ಬಟ್ಟಲಿಗೆ ನೀರು ತುಂಬಿಸುತ್ತಿದ್ದರು (ಕೆಲವು ಕಡೆ ಮರಳನ್ನು ತುಂಬುತ್ತಿದ್ದರು) ಆ ನೀರು (ಮರಳು) ಪೂರ್ತಿಯಾಗಿ ಕೆಳಗಿರುವ ಬಟ್ಟಲಿಗೆ ಸೋರಿ ಹೋದಾಗ ಒಂದು ಘಳಿಗೆ ಆಯಿತು ಎಂದು ಲೆಕ್ಕಾಚಾರ ಮಾಡಲಾಗುತ್ತಿತ್ತು.

**ಕಮಲಜ** : ಕಮಲ–ತಾವರೆ ಜ–ಜನಿಸಿದವನು. ಕಮಲದಲ್ಲಿ ಜನಿಸಿದವನು, ಬ್ರಹ್ಮ

**ಬ್ರಹ್ಮೇತಿಕಾಱ[ರ]** : ಬೊಮ್ಮೇತಿಗಾಱ[ರ], ಬ್ರಾಹ್ಮಣ ವಧೆಯನ್ನು ಮಾಡಿದವನು; ಬ್ರಹ್ಮಹತ್ಯಾದೋಷಕ್ಕೆ ಒಳಗಾದವನು.

**ಶತಕುಂಭಯಜ್ಞ**: ಯಶೋ ನಿರೀಕ್ಷೆಯಿಂದ ಮಾಡುವ ಸಾತ್ವಿಕ ಯಜ್ಞದ ವಿಧ. ನೂರು ಕಲಶಗಳ ಸಹಿತ ನಡೆಸುವ ಸಂಕಲ್ಪಿತ ಯಜ್ಞ, ಆಶ್ರಮ ವಾಸಿಯಾದ ಧೌಮ್ಯ ಮಹರ್ಷಿ ಶತಕುಂಭ ಯಜ್ಞವನ್ನು ನಡೆಸಿದ್ದರು.



## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**

**ಅ. ಹೊಂದಿಸಿ ಬರೆಯಿರಿ**

| 'ಅ' ಪಟ್ಟಿ | 'ಆ' ಪಟ್ಟಿ |
|---|---|
| ೧. ಪುಷ್ಪದತ್ತ | ಹಂಪಿ |
| ೨. ರುದ್ರಕನ್ನಿಕೆಯರು | ಬಾಗಿಲು |
| ೩. ಚೋಳದೇಶ | ನಂಬಿಯಣ್ಣ |
| ೪. ಕದ | ಪರವೆ–ಸಂಕಿಲೆ |
| ೫. ಗಿರಿಜೆ | ಮಣಮಂದಪುತ್ತೂರು |
| | ಶಿವ |
| | ಪಾರ್ವತಿ |

ಆ. **ಕೊಟ್ಟಿರುವ ನಾಲ್ಕು ಆಯ್ಕೆಗಳಲ್ಲಿ ಸರಿಯಾದ ಉತ್ತರವನ್ನು ಆರಿಸಿ ಬರೆಯಿರಿ**

೧. ಹರಿಹರನ ಕಾಲ ________
[೧೧೬೦ ೧೩೬೦ ೧೨೦೦ ೧೪೬೦]

೨. ವೃದ್ಧಮಾಹೇಶ್ವರ _______ ಕೊಡದ ಮೇಲೆ ಬಿದ್ದನು
[ಎಣ್ಣೆಯ ಹಾಲಿನ ತುಪ್ಪದ ಮಜ್ಜಿಗೆ]

೩. ಹರಲೀಲೆ ಪಾಠವನ್ನು ___________ ರಗಳೆಯಿಂದ ಆಯ್ದುಕೊಳ್ಳಲಾಗಿದೆ.
[ಬಸವರಾಜ ದೇವರ ರಗಳೆ ನಂಬಿಯಣ್ಣನ ರಗಳೆ ಗುಂಡಯ್ಯನ ರಗಳೆ ಮಹಾದೇವಿಯಕ್ಕನ ರಗಳೆ]

೪. ವೃದ್ಧಮಾಹೇಶ್ವರನು ಕೈಲಾಸದಿಂದ _________ ಗೆ ಬಂದನು.
[ಮಣಮಂದಪುತ್ತೂರು ತಿರುವಾರೂರು ತಿರುವತ್ತಿಯೂರು ಕೈಲಾಸಪುರ]

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ ಪ್ರಶ್ನೆಗಳು**

ಅ. **ಕೊಟ್ಟಿರುವ ಪ್ರಶ್ನೆಗಳಿಗೆ ನಾಲ್ಕು/ಐದು ವಾಕ್ಯಗಳಲ್ಲಿ ಉತ್ತರಿಸಿ**

೧. ಶಿವನು ವೃದ್ಧಮಾಹೇಶ್ವರನಾಗಿ ವೇಷಧರಿಸಲು ಕಾರಣವೇನು?

೨. ವೃದ್ಧಮಾಹೇಶ್ವರನನ್ನು ಕವಿ ಹೇಗೆ ವರ್ಣಿಸಿದ್ದಾನೆ?

೩. ಮದುವೆ ಮಂಟಪದಲ್ಲಿ ವೃದ್ಧನು ಮಾಡಿದ ಅವಾಂತರಗಳಾವುವು?

ಆ. **ಕೊಟ್ಟಿರುವ ಪ್ರಶ್ನೆಗಳಿಗೆ ಎರಡು/ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ವಿರೂಪಾಕ್ಷನು ಗಿರಿಜೆಗೆ ಏನೆಂದು ಹೇಳಿದನು?

೨. ಚೋಳದೇಶದಲ್ಲಿದ್ದ ಮೂರು ಗ್ರಾಮಗಳನ್ನು ಹೆಸರಿಸಿ.

೩. ವೃದ್ಧ ಮಾಹೇಶ್ವರನು ಶಿವಮಂತ್ರವನ್ನು ಹೇಳುತ್ತಿದ್ದ ರೀತಿಯನ್ನು ತಿಳಿಸಿ.

೪. ಕೆಳಗೆ ಬಿದ್ದ ವೃದ್ಧನನ್ನು ನೋಡಿ ನೆರೆದಿದ್ದ ಜನ ಏನೆಂದು ಮಾತನಾಡಿಕೊಂಡರು?

ಇ. **ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ನಂಬಿಯಣ್ಣನ ಪೂರ್ವಜನ್ಮದ ಹೆಸರೇನು?

೨. ಹರಲೀಲೆ ಪಾಠದ ಮೂಲ ಕೃತಿ ಯಾವುದು?

೩. ಹರಲೀಲೆ ಪಾಠದ ಕವಿಯ ಹೆಸರೇನು?

೪. ಗಿರಿಜೆ ಎಲ್ಲಿ ಇರಬೇಕೆಂದು ಶಿವನು ತಿಳಿಸಿದನು?

೫. ಹರಿಹರ ಬರೆದಿರುವ ಎರಡು ಕೃತಿಗಳನ್ನು ಹೆಸರಿಸಿ.

ಈ. **ಕೊಟ್ಟಿರುವ ವಾಕ್ಯಗಳ ಸಂದರ್ಭಸಹಿತ ಸ್ವಾರಸ್ಯವನ್ನು ಬರೆಯಿರಿ**

೧. "ಸಕಲಸುಖಮಂ ಪೂಜೆಯಾಗಿ ಕೈಕೊಂಡುಬರ್ಪೆನ್"

೨. "ನೀನತ್ಯಂತ ಕರುಣಿ"

೩. "ಪುಣ್ಯಂ ಪಣ್ಣಾದಂತೆ"

೪. "ಈ ವೃದ್ಧಂ ಕಿಱುಕುಳನಲ್ಲ"

## ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**

**ಸಂಸ್ಕೃತ ಸಂಧಿಗಳು :**

ನಮೂದಿತ ವಾಕ್ಯಗಳನ್ನು ಗಮನಿಸಿ: **– ರಾಮಾಯಣ ಮಹೋನ್ನತ ಗ್ರಂಥ**

**– ಸೂರ್ಯೋದಯ ದೃಶ್ಯ ಅತ್ಯಂತ ಮನೋಹರವಾಗಿದೆ**

ನಮೂದಿತ ಎರಡು ವಾಕ್ಯಗಳಲ್ಲಿರುವ **ರಾಮಾಯಣ, ಮಹೋನ್ನತ, ಗ್ರಂಥ, ಸೂರ್ಯೋದಯ, ದೃಶ್ಯ, ಅತ್ಯಂತ, ಮನೋಹರ** –ಎಲ್ಲವೂ ಸಂಸ್ಕೃತ ಪದಗಳು. ಆದರೆ ಕನ್ನಡ ವಾಕ್ಯಗಳೆಂದು ಪರಿಗಣಿಸಲ್ಪಟ್ಟಿವೆ. ಹೀಗೆ ಕನ್ನಡ ಭಾಷೆಗೆ ಸಂಸ್ಕೃತ ಪದಗಳು ಸೇರ್ಪಡೆಯಾಗಿವೆ. ಇಂತಹ ಸಂಸ್ಕೃತ ಪದಗಳೇ ಸೇರಿಸಂಧಿಯಾದರೆ ಅವುಗಳನ್ನು **ಸಂಸ್ಕೃತಸಂಧಿ** ಎಂದು ಕರೆಯಲಾಗುತ್ತದೆ. ಎರಡು ಸ್ವರಗಳ ನಡುವೆ ಸಂಧಿಯಾದರೆ ಅದು **ಸ್ವರಸಂಧಿ.** ಸ್ವರಕ್ಕೆ ವ್ಯಂಜನ ಅಥವಾ ವ್ಯಂಜನಕ್ಕೆ ವ್ಯಂಜನ ಸೇರಿ ಸಂಧಿಯಾದರೆ ಅದು **ವ್ಯಂಜನಸಂಧಿ.**



- **ಸಂಸ್ಕೃತ ಸ್ವರಸಂಧಿಗಳು**

**ಸವರ್ಣದೀರ್ಘಸಂಧಿ**

**– ವಿದ್ಯಾಭ್ಯಾಸ ಮಾಡು**

**– ಗುರೂಪದೇಶವನ್ನು ಪಡೆ**

ನಮೂದಿತ ಎರಡೂ ಹೇಳಿಕೆಗಳಲ್ಲಿರುವ **ವಿದ್ಯಾಭ್ಯಾಸ, ಗುರೂಪದೇಶ** ಪದಗಳನ್ನು ಗಮನಿಸಿ.

**ವಿದ್ಯಾ** + **ಅಭ್ಯಾಸ** > **ವಿದ್ಯಾಭ್ಯಾಸ**

**ದ್** + **ಯ್** + **ಆ** + **ಅ** > **ದ್** + **ಯ್** + **ಆ**

ಇಲ್ಲಿ ಪೂರ್ವಪದದ ಕೊನೆಯಲ್ಲಿರುವ **–ಆ** ಸ್ವರದ ಮುಂದೆ ಪರಪದದ ಆದಿಯಲ್ಲಿ **ಅ–** ಸ್ವರ ಇರುವುದು. ಇವೆರಡೂ ಸ್ವರಗಳು ಒಂದೇ ಸ್ಥಾನದಲ್ಲಿ ಹುಟ್ಟುವುದರಿಂದ ಇವು **ಸವರ್ಣಗಳು.** ಈ ಸವರ್ಣ ಸ್ವರಗಳು ಸಂಧಿಯಾದಾಗ ದೀರ್ಘಸ್ವರವಾಗಿ ಪರಿವರ್ತನೆಯಾಗುತ್ತವೆ. ಹಾಗಾಗಿ ಇದನ್ನು **ಸವರ್ಣ ದೀರ್ಘ ಸಂಧಿ** ಎಂದು ಕರೆಯಲಾಗಿದೆ.

ಉ.ದಾ. :

**ಗುರು** + **ಉಪದೇಶ** > **ಗುರೂಪದೇಶ**

**ರ್** + **ಉ** + **ಉ** > **ರ್** + **ಊ**

ಇಲ್ಲಿಯೂ ಎರಡು **ಉ** ಕಾರಗಳು ಸೇರಿ **ಊ** ಕಾರ ಆಗಿದೆ. ಹಾಗಾಗಿ ಇದು ಕೂಡಾ ಸವರ್ಣದೀರ್ಘ ಸಂಧಿಗೆ ಉದಾಹರಣೆ.

**ಸೂತ್ರ : ಸವರ್ಣಸ್ವರಗಳು ಒಂದರ ಮುಂದೆ ಒಂದು ಸೇರಿ ಸಂಧಿಯಾದಾಗ ಅವೆರಡರ ಸ್ಥಾನದಲ್ಲಿ ಅದೇ ಜಾತಿಯ ದೀರ್ಘಸ್ವರ ಆದೇಶವಾಗಿ ಬಂದರೆ ಅದನ್ನು ಸವರ್ಣ ದೀರ್ಘಸಂಧಿ ಎಂದು ಕರೆಯುವರು.**

## ಗುಣಸಂಧಿ

**– ದೇವೇಂದ್ರನ ಸಭೆ**

**– ಸೂರ್ಯೋದಯವಾಯಿತು**

ಇಲ್ಲಿರುವ **ದೇವೇಂದ್ರ ಮತ್ತು ಸೂರ್ಯೋದಯ** ಪದಗಳನ್ನು ಗಮನಿಸಿ.

**ದೇವ** + **ಇಂದ್ರ** > **ದೇವೇಂದ್ರ**

**ವ್** + **ಅ** + **ಇಂ** > **ವ್** + **ಏಂ**

ಇಲ್ಲಿ ಪೂರ್ವಪದದ ಅಂತ್ಯದಲ್ಲಿರುವ **ಅ** ಕಾರಕ್ಕೆ ಪರಪದದ ಆದಿಯಲ್ಲಿರುವ **ಇಂ** ಕಾರ ಸೇರಿ **ಏಂ** ಕಾರ ಆದೇಶವಾಗಿದೆ.

**ಸೂರ್ಯ** + **ಉದಯ** > **ಸೂರ್ಯೋದಯ**

**ರ್** + **ಯ್** + **ಅ** + **ಉ** > **ರ್** + **ಯ್** + **ಓ**

ಇಲ್ಲಿ ಪೂರ್ವಪದದ ಅಂತ್ಯದಲ್ಲಿರುವ **ಅ** ಕಾರಕ್ಕೆ ಪರಪದದ ಆದಿಯಲ್ಲಿರುವ **ಉ** ಕಾರ ಸೇರಿ **ಓ** ಕಾರ ಆದೇಶವಾಗಿ ಬಂದಿದೆ.

**ಸೂತ್ರ : ಅ ಆ ಕಾರಗಳಿಗೆ ಇ ಈ ಕಾರಗಳು ಪರವಾದರೆ ಅವೆರಡರ ಸ್ಥಾನದಲ್ಲಿ ಏ ಕಾರವೂ ಉ ಊ ಕಾರಗಳು ಪರವಾದರೆ ಓ ಕಾರವೂ ಋ ಕಾರ ಪರವಾದರೆ ಅರ್ ಕಾರವೂ ಆದೇಶವಾಗಿ ಬಂದರೆ ಅದು ಗುಣಸಂಧಿ.**

**ಉದಾ:** ಸುರೇಂದ್ರ ಮಹೇಶ್ವರ ಚಂದ್ರೋದಯ ದೇವರ್ಷಿ ಇತ್ಯಾದಿ

## ಸಮಾಸ

**ತತ್ಪುರುಷ ಕರ್ಮಧಾರಯ ಮತ್ತು ದ್ವಿಗುಸಮಾಸಗಳ** ಬಗ್ಗೆ ಈಗಾಗಲೇ ತಿಳಿದಿರುವಿರಿ. ಉಳಿದ ಸಮಾಸಗಳನ್ನು ತಿಳಿಯಿರಿ.

## ಅಂಶಿಸಮಾಸ

ದೈನಂದಿನ ಜೀವನದಲ್ಲಿ ಮಾತನಾಡುವಾಗ **ಅಂಗೈ, ಮುಂದಲೆ, ಕೊನೆಹುಬ್ಬು,** ಇತ್ಯಾದಿ ಪದಗಳನ್ನು ಬಳಸುತ್ತೇವೆ. ಈ ಪದಗಳ ರಚನೆ ಇಂತಿದೆ:

ಉದಾ.: ಕೈಯ + ಅಡಿ > ಅಂಗೈ

ತಲೆಯ + ಮುಂದು > ಮುಂದಲೆ

ಹುಬ್ಬಿನ + ಕೊನೆ > ಕೊನೆಹುಬ್ಬು

ನಮೂದಿತ ಉದಾಹರಣೆಯನ್ನು ಗಮನಿಸಿದಾಗ ಪೂರ್ವಪದ ಅನೇಕ ಅಂಶಗಳನ್ನು ಹೊಂದಿರುವ ಅಂಶಿಯೂ ಪರಪದವು ಅಂಶಿಯ ಒಂದು ಅಂಶವನ್ನೂ ಸೂಚಿಸುವುದು.

**ಸೂತ್ರ : ಪೂರ್ವೋತ್ತರ ಪದಗಳು ಅಂಶಾಂಶಿ ಭಾವಸಂಬಂಧದಿಂದ ಸೇರಿ ಪೂರ್ವಪದದ ಅರ್ಥ ಪ್ರಧಾನವಾಗುಳ್ಳ ಸಮಾಸವೇ ಅಂಶಿಸಮಾಸ. ಈ ಸಮಾಸವನ್ನು ಅವ್ಯಯೀಭಾವ ಸಮಾಸವೆಂತಲೂ ಕರೆಯುವರು.**

**ಉದಾ.: ಅಂಗಾಲು ಮುಂಗಾಲು ಹಿಂದಲೆ ಮುಂಬಾಗಿಲು ಇತ್ಯಾದಿ**

**ಛಂದಸ್ಸು :**

## ರಗಳೆ

**'ರಗಳೆ'** ಎಂಬುದು 'ರಘಟಾ' ಎಂಬ ಸಂಸ್ಕೃತ ಪದದ ತದ್ಭವರೂಪ. ಕನ್ನಡದಲ್ಲಿ ಸಾಮಾನ್ಯವಾಗಿ ಉತ್ಸಾಹ, ಮಂದಾನಿಲ ಮತ್ತು ಲಲಿತ ಎಂದು ಮೂರು ವಿಧದ ರಗಳೆಗಳು ಪ್ರಸಿದ್ಧವಾಗಿವೆ. 'ರಗಳೆ'ಯಲ್ಲಿ ಇಂತಿಷ್ಟೇ ಸಾಲುಗಳು ಇರಬೇಕೆಂಬ ನಿಯಮವಿಲ್ಲ. ಆದರೆ ಎಲ್ಲಾ ಸಾಲುಗಳು ಸಮಾನವಾದ ಮಾತ್ರಾಗಣದಿಂದ ಕೂಡಿರುತ್ತವೆ. ಎರಡೆರಡು ಸಾಲುಗಳಲ್ಲಿ ಪ್ರಾಸಗಳಿರುತ್ತವೆ.

**ಉತ್ಸಾಹರಗಳೆ :**

| ∪∪∪ | — ∪ | — ∪ | — ∪ |
|---|---|---|---|
| ಕುಳಿರ್ವ | ಪೂಗೊ | ಳಂಗ | ಳಲ್ಲಿ |
| ∪∪∪ | — ∪ | — ∪ | — ∪ |
| ತಳಿರ | ಕಾವ | ಣಂಗ | ಳಲ್ಲಿ |
| — ∪ | — ∪ | — ∪ | — ∪ |
| ತುಂಬಿ | ವಿಂಡಿ | ನಂತೆ | ಪಾಡಿ |
| — ∪ | — ∪ | — ∪ | — ∪ |
| ಜಕ್ಕ | ವಕ್ಕಿ | ಯಂತೆ | ಕೂಡಿ |

ಈ ರಗಳೆಯಲ್ಲಿ ಪ್ರತಿ ಸಾಲಿನಲ್ಲೂ ಮೂರು ಮಾತ್ರೆಗಳ ನಾಲ್ಕು ಗಣಗಳುಂಟು ಮೊದಲೆರಡು ಸಾಲುಗಳಲ್ಲಿ ಆದಿ ಮತ್ತು ಅಂತ್ಯಪ್ರಾಸಗಳೂ ಮತ್ತೆರಡು ಸಾಲುಗಳಲ್ಲಿ ಅಂತ್ಯಪ್ರಾಸವೂ ಇರುವುದನ್ನು ಗಮನಿಸಬಹುದು.

**ಸೂತ್ರ : ಎರಡೆರಡು ಸಾಲುಗಳಲ್ಲಿ ಪ್ರಾಸ ನಿಯಮವನ್ನಿಟ್ಟುಕೊಂಡು ಪ್ರತಿಪಾದದಲ್ಲೂ ಮೂರು ಮಾತ್ರೆಗಳ ನಾಲ್ಕುಗಣಗಳಿದ್ದು ಸಾಲುಗಳ ಸಂಖ್ಯಾನಿಯಮವಿಲ್ಲದೆ ಇರುವ ಪದ್ಯ ಜಾತಿಯೇ ಉತ್ಸಾಹರಗಳೆಯೆನಿಸುವುದು.**

**ಶಿಥಿಲದ್ವಿತ್ವ :** ಒಂದು ಅಕ್ಷರವು ಸಂಯುಕ್ತಾಕ್ಷರವಾಗಿದ್ದರೆ (ಒತ್ತಕ್ಷರ) ಆ ಅಕ್ಷರವನ್ನು ತೇಲಿಸಿ ಉಚ್ಚರಿಸಿದಾಗ ಅಲ್ಲಿರುವ ಒತ್ತು ಶಿಥಿಲವಾಗುತ್ತದೆ ಇಂತಹ ಅಕ್ಷರವನ್ನೇ ಶಿಥಿಲದ್ವಿತ್ವಾಕ್ಷರ ಎಂದು ಕರೆಯುವುದು. ಮೇಲಿನ

ಪದ್ಯದ ಮೊದಲ ಸಾಲಿನ ಮೊದಲ ಪದವಾದ 'ಕುಳಿರ್ವ' ಎಂಬಲ್ಲಿ 'ರ್ವ' ಎಂಬುದು ಒತ್ತಕ್ಷರವಾಗಿದೆ (ದ್ವಿತ್ವಾಕ್ಷರ). ನಿಯಮಾನುಸಾರ ಅದರ ಹಿಂದಿನ ಅಕ್ಷರ 'ಳಿ' ಎಂಬುದು ಗುರು ಎನಿಸಿಕೊಳ್ಳುತ್ತದೆ. ಆದರೆ ಇಲ್ಲಿರುವ 'ರ್ವ' ಅಕ್ಷರ ಶಿಥಿಲದ್ವಿತ್ವಾಕ್ಷರವಾದ ಕಾರಣ ಅಂದರೆ 'ರ್ವ' ಎಂಬ ಅಕ್ಷರವನ್ನು ತೇಲಿಸಿ ಉಚ್ಚರಿಸುವುದರಿಂದ ಇಲ್ಲಿ ಶಿಥಿಲದ್ವಿತ್ವ ಉಂಟಾಗಿ 'ಳಿ' ಎಂಬ ಅಕ್ಷರವು ಲಘು ಎನಿಸಿಕೊಳ್ಳುತ್ತದೆ.

**ಮಂದಾನಿಲ ರಗಳೆ :**

| –∪∪ | – – | ∪∪ ∪∪ | – – |
|---|---|---|---|
| ಆಡುವ | ಗುಂಡ | ಯ್ಯನ ಹೊಸ | ನೃತ್ಯಂ |
| – ∪∪ | ∪∪– | – ∪∪ | – – |
| ನೋಡುವ | ಶಿವನಂ | ಮುಟ್ಟಿತು | ಸತ್ಯಂ |
| ∪∪ – | – – | – – | – – |
| ಸುಖದಾ | ಟಂತ | ನ್ನಂಬೆಂ | ಬತ್ತಲ್ |
| ∪∪ ∪∪ | – – | ∪∪– | – – |
| ಸುಖ ಮುಖ | ದಿಂದಂ | ಮನಮಂ | ಸುತ್ತಲ್ |

ಈ ಪದ್ಯಭಾಗದಲ್ಲಿ ಪ್ರತಿಯೊಂದು ಪಾದದಲ್ಲೂ ನಾಲ್ಕು ಮಾತ್ರೆಗಳ ನಾಲ್ಕು ಗಣಗಳಿವೆ. ಮೊದಲೆರಡು ಸಾಲುಗಳಲ್ಲಿ 'ಡ್' ಎಂಬ ಪ್ರಾಸಾಕ್ಷರವೂ ಮತ್ತೆರಡು ಸಾಲುಗಳಲ್ಲಿ 'ಖ್' ಎಂಬ ಪ್ರಾಸಾಕ್ಷರವೂ ಆದಿಪ್ರಾಸವಾಗಿ ಬಂದಿವೆ. ಅದೇ ರೀತಿ ಎರಡೆರಡು ಸಾಲುಗಳಲ್ಲಿ ಅಂತ್ಯಪ್ರಾಸವೂ ಇದೆ.



**ಸೂತ್ರ : ನಾಲ್ಕು ಮಾತ್ರೆಗಳ ನಾಲ್ಕು ಗಣಗಳು ಪ್ರತಿ ಪಾದದಲ್ಲೂ ಬಂದು ಎರಡೆರಡು ಸಾಲುಗಳಿಗೆ ಪ್ರಾಸನಿಯಮವಿರುವ ಪದ್ಯಜಾತಿಗೆ ಮಂದಾನಿಲ ರಗಳೆಯೆನ್ನುವರು.**

**ಲಲಿತರಗಳೆ :**

| ∪∪∪∪∪ | ∪∪∪∪∪ | ∪∪∪∪∪ | – ∪∪∪ |
|---|---|---|---|
| ಆಳಿಯೆರಗ | ದನಿಲನಲು | ಗದ ರವಿ ಕ | ರಂ ಪುಗದ |
| ∪∪ – ∪ | ∪∪–∪ | ∪∪∪∪∪ | ∪∪∪∪∪ |
| ಸುಳಿಗೊಂಡು | ದಳವೇರಿ | ಹೆಸರಳಿದ | ಬೆಳಪುಳಿದ |
| ∪∪∪∪∪ | – ∪ – | ∪∪ –∪ | – – ∪ |
| ಸುರುಚಿರಮೆ | ನಿಪ್ಪಮೀ | ಸಲಮೊಗ್ಗೆ | ಯಂಕೊಂಡು |
| ∪∪–∪ | – ∪∪∪ | ∪∪∪∪∪ | – – ∪ |
| ಇರವಂತಿ | ಯೊಳ್ ಮೆರೆವ | ಬಿರಿಮುಗುಳ್ಗ | ಳಂ ಕೊಂಡು |

ಇಲ್ಲಯೂ ಕೊನೆಯ ಸಾಲಿನಲ್ಲಿ 'ಳ್ಗ' ಎಂಬುದು ದ್ವಿತ್ವಾಕ್ಷರ (ಒತ್ತಕ್ಷರ) ಆಗಿದ್ದರು ಇಲ್ಲಿ ಶಿಥಿಲದ್ವಿತ್ವ ಇರುವುದರಿಂದಾಗಿ ಅದರ ಹಿಂದಿನ ಅಕ್ಷರ 'ಗು' ಎಂಬುದು ಲಘುವಾಯಿತು.

ಈ ಪದ್ಯದ ಪ್ರತಿಯೊಂದು ಸಾಲಿನಲ್ಲಿಯೂ ಐದು ಮಾತ್ರೆಗಳ ನಾಲ್ಕು ಗಣಗಳಿವೆ. ಎರಡೆರಡು ಸಾಲುಗಳಲ್ಲಿ ಪ್ರಾಸವಿದೆ.

**ಸೂತ್ರ : ಪ್ರತಿ ಪಾದದಲ್ಲೂ ಐದೈದು ಮಾತ್ರೆಗಳ ನಾಲ್ಕು ಗಣಗಳಿದ್ದು ಎರಡೆರಡು ಸಾಲುಗಳಲ್ಲಿ ಪ್ರಾಸಗಳಿರುವಂತೆ ರಚಿಸಲ್ಪಟ್ಟ ರಗಳೆಯೇ ಲಲಿತರಗಳೆ.**

## ಭಾಷಾ ಚಟುವಟಿಕೆ

**ಅ. ಈ ಪದ್ಯಭಾಗಕ್ಕೆ ಪ್ರಸ್ತಾರ ಹಾಕಿ ಗಣ ವಿಭಾಗಮಾಡಿ ಛಂದಸ್ಸಿನ ಹೆಸರು ಬರೆದು ಲಕ್ಷಣ ಬರೆಯಿರಿ.**

ರಸಫಳಂಗಳನ ಐಸುತಿರ್ಪ ಶುಕನಿಕರಮಂ

ಪೊಸ ಪೂವನೆಳಸಿರ್ಪ ಮಧುಕರ ಪ್ರಕರಮಂ

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ಸಂಸ್ಕೃತ ಸಂಧಿ ಎಂದರೇನು? ಅದರ ವಿಧಗಳಾವುವು?

೨. ಸವರ್ಣದೀರ್ಘಸಂಧಿ ಎಂದರೇನು?

೩. ಗುಣಸಂಧಿ ಎಂದರೇನು? ಉದಾಹರಣೆ ಕೊಡಿ

೪. ಸಮಾಸ ಎಂದರೇನು? ಅದರ ವಿಧಗಳಾವುವು?

೫. ರಗಳೆ ಛಂದಸ್ಸಿನಲ್ಲಿ ಎಷ್ಟು ಪಾದಗಳಿರುತ್ತವೆ?

೬. ಕನ್ನಡದಲ್ಲಿ ಪ್ರಸಿದ್ಧವಾದ ರಗಳೆಗಳೆಷ್ಟು? ಯಾವುವು?



## ಪೂರಕ ಓದು

➢ **ಹರಿಹರನ ಬಸವರಾಜದೇವರ ರಗಳೆ ಮತ್ತು ನಂಬಿಯಣ್ಣನ ರಗಳೆಯನ್ನು ಸಂಗ್ರಹಿಸಿ ಓದಿ.**



# ಇತಿಹಾಸದ ಚಕ್ಕಡಿ

[ಆತ್ಮಕತೆ]

– ಅರವಿಂದ ಮಾಲಗತ್ತಿ

**ಮುನ್ನುಯಾರಿ**

ಕನ್ನಡ ಸಾಹಿತ್ಯ ಪ್ರಕಾರದಲ್ಲಿ ದಲಿತಸಾಹಿತ್ಯ ಪ್ರಕಾರವೂ ಒಂದು. ಸಮಾಜದಲ್ಲಿನ ಶೋಷಿತರ ನೋವು, ಕಷ್ಟ, ವೇದನೆಯನ್ನು ಒಳಗೊಂಡ ಸಾಹಿತ್ಯ. ಪ್ರತಿಭಟನೆ ಮತ್ತು ವಿರೋಧವನ್ನು ಸಾಹಿತ್ಯದ ಮೂಲಕ ವ್ಯಕ್ತಪಡಿಸುವುದಾಗಿದೆ. ಆ ಮೂಲಕ ಸಮಾಜದಲ್ಲಿ ಸಮಾನತೆಯನ್ನು ಮೂಡಿಸುವುದು ಹಾಗೂ ಆಮೂಲಾಗ್ರ ಬದಲಾವಣೆಯನ್ನು ತರುವುದು ಪ್ರಕೃತ ಸಾಹಿತ್ಯದ ಮುಖ್ಯ ಉದ್ದೇಶ.

## ಅರ್ಥೈಸಿ – ಓದಿ

ಚಕ್ಕಡಿ ಕೇರಿ ಹಂಗಿಸು ಭಂಗಿ ಖಬರು ಹಿಂಜರಿ

ಟೂರಿಂಗ್‌ಟಾಕೀಸ್ ಅಂಗಲಾಚು ಚೇರಮನ್ನು ಕಿರುಕುಳ ಬುಡ್ಡಿ

## ನಿಗದಿತ ಮೂಲ ಆತ್ಮಕತೆ – [ಗದ್ಯ–ಪದ್ಯ]

**ಇತಿಹಾಸದ ಚಕ್ಕಡಿ, ಚಕ್ರದ ಬಾಯಿಯಲಿ**
**ಪರಿಮಳ–ಬಣ್ಣಗಳಿಲ್ಲದ ಹೂಗಳ ರಾಶಿಯ ಮೊಳಗು**
**ನೆಲಸಮನಾಗೆ ನೀರು ಹರಿಯುವುದು**
**ಉಪ್ಪು ಸಕ್ಕರೆಯ ಸಂಜಾತ**
**ಸಮರಸದ ಜೋಗದ ಜಲಪಾತ**



ನಾನು ಸಾಮಾನ್ಯವಾಗಿ ಓದುವುದು ರಾತ್ರಿ ವೇಳೆಯಲ್ಲಿ. ಈ ಕೇರಿಗೆ ಜೀವಂತಿಕೆ ಬಂದಾಗ ಪಿತ್ತ ನೆತ್ತಿಗೇರುತ್ತಿತ್ತು. ಹೀಗಾಗಿ ಇವರೊಂದಿಗೆ ಕದನ. ಓದು, ಪರೀಕ್ಷೆ ಹತ್ತಿರ ಬಂದಾಗ ಮಾತ್ರ ಇರುತ್ತಿತ್ತು. 'ನಾವು ಓದುತ್ತಿದ್ದೇವೆ' ಎನ್ನುವ ಅಹಂ ತೋರಿಕೆಯದ್ದೇ ಹೆಚ್ಚಾಗಿರುತ್ತಿತ್ತು. ಕೆಲವು ಬಾರಿ ಪೋಲೀಸ್ ಸ್ಟೇಷನ್‌ವರೆಗೆ ಹೋಗಿದ್ದೂ ಇದೆ. ಆದರೆ ಅದರ ಪರಿಣಾಮ ಮಾತ್ರ ಸೊನ್ನೆಯಾಗಿರುತ್ತಿತ್ತು.

ನನ್ನ ಓದಿನ ಆತ್ಮೀಯ ಸ್ಥಳವೆಂದರೆ 'ಪದ್ಮಾವತಿಯ ಗುಡ್ಡ'. ಪದ್ಮಾವತಿಯ ದೇವಸ್ಥಾನ ಜೈನರಿಗೆ ಸಂಬಂಧಿಸಿದ್ದು. ಪ್ರಶಾಂತವಾದ ಸ್ಥಳ. ದೊಡ್ಡದೊಡ್ಡ ಕಲ್ಲು ಬಂಡೆಗಳಿಂದ ತುಂಬಿದೆ. ಇಲ್ಲಿಯ 'ಅಳಬುರಕ ಕಲ್ಲು' ಹೆಸರುವಾಸಿ. ಈ ಸ್ಥಳಕ್ಕೆ ಜನ ಬರಲು ಹೆದರುತ್ತಿದ್ದರು. ಮೊದಮೊದಲು ನಮ್ಮ ಕೇರಿಯ ಒಬ್ಬನೇ ಒಬ್ಬ ವ್ಯಕ್ತಿ ಇಲ್ಲಿಗೆ ಓದಲು ಬರುತ್ತಿದ್ದ. ಜತೆಗೋಸ್ಕರ ಕೆಲವೊಮ್ಮೆ ನನ್ನನ್ನು ಕರೆದುತರುತ್ತಿದ್ದ. ಆತನ ಹೆಸರು ಇಟ್ಟಪ್ಪ. ಈತ ಈಗ ಬ್ಯಾಂಕ್ ನೌಕರ. ಈತನ ಓದುವ ಹವ್ಯಾಸವೇ ನನ್ನನ್ನು ಓದುವಂತೆ ಪ್ರೇರೇಪಿಸಿತು.

ಈತನ ಓದು ಮುಗಿದ ಅನಂತರ ನಾನೊಬ್ಬನೇ ಎಷ್ಟೋ ಬಾರಿ ಅಲ್ಲಿಗೆ ಓದಲು ಹೋಗುತ್ತಿದ್ದೆ. ಈಗಂತೂ ಅದು ಓದುಗರ ಪವಿತ್ರ ಸ್ಥಳವಾಗಿದೆ. ಎಲ್ಲೆಂದರಲ್ಲಿ ಆ ಗುಡ್ಡದ ತುಂಬೆಲ್ಲ ಓದುಗರಿರುವುದು ನೋಡಿ ನನಗಂತೂ ಎಲ್ಲಿಲ್ಲದ ಹೆಮ್ಮೆ.

ನನ್ನೊಬ್ಬನ ಓದಿನ ದಿನಗಳಲ್ಲಿ ಕೇರಿಯ ಸ್ನೇಹಿತರೆಲ್ಲ ನನ್ನನ್ನು ಹಂಗಿಸುತ್ತಿದ್ದರು. 'ನಾಳೆ ಇಂವ ಚೌಕಟ್ಯಾಗ ಬರ್ತಾನಪ್ಪಾ' ಎನ್ನುತ್ತಿದ್ದರು. 'ಮತ್ತೇನಪ್ಪಾ ಚೌಕಟ್' ಎಂದೇ ಮಾತನ್ನಾರಂಭಿಸುತ್ತಿದ್ದರು. ಎಂದರೆ ಓದಿ ರ್‍ಯಾಂಕ್ ಬರ್ತಾನೆ. ಆಗ ಈತನ ಫೋಟೋ ಪತ್ರಿಕೆಯಲ್ಲಿ ಬರುತ್ತದೆಂದು ಗೇಲಿ ಮಾಡುತ್ತಿದ್ದರು. ಆದರೆ ಪ್ರತಿ ವರ್ಷ ಪಾಸಾಗುತ್ತಾ ಹೋದಾಗ ಅನಂತರ ಅವರು ನನ್ನ ಹಾದಿಯನ್ನೇ ತುಳಿದರು. ನನ್ನ ಹಿಂದೆ ನನ್ನ ಕೇರಿಯ ಜನ; ಕೇರಿಯ ಜನಗಳ ಅನಂತರ ಊರ ಜನರೇ ಪದ್ಮಾವತಿಯ ಗುಡ್ಡಕ್ಕೆ ಬರಲು ಪ್ರಾರಂಭಿಸಿದರು.

ಮೊದಮೊದಲು ನಾನು ಪದ್ಮಾವತಿ ಗುಡ್ಡಕ್ಕೆ ಹೋಗುವಾಗ ಅದೊಂದು ಹೆದರಿಕೆಯ ತಾಣ ಎನಿಸುತ್ತಿತ್ತು. ಸುತ್ತೆಲ್ಲ ಹಾಸಿನಿಂತ ಬಂಡೆಗಳು, ಅದರ ಮೇಲೆ ನರ್ತನದ ಭಂಗಿಯಲ್ಲಿ ನಿಂತ ವಿಭಿನ್ನಾಕಾರದ ಕಲ್ಲು ಬಂಡೆಗಳು. ಅದರಲ್ಲಿಯೇ ಗುಹೆಗಳು, ಕಾಡು ಪ್ರಾಣಿಗಳು ಇವೆಲ್ಲವೂ ಹೆಚ್ಚು ಮನಸೆಳೆಯುವಂಥವು. ನಾನಂತೂ ಕಲ್ಲು ಪೊಟರೆಯ ಒಳಗೆ ಮಲಗಿ ಓದುತ್ತಿದ್ದೆ. ಐದು ಗಂಟೆಯೊಳಗಾಗಿಯೇ ಮನೆಯಲ್ಲಿರುತ್ತಿದ್ದೆ. ಒಮ್ಮೆ ನಿದ್ದೆ ಬಂದು ಕಲ್ಲಿನ ಬಂಡೆಯಡಿಯಲ್ಲಿಯೇ ಮಲಗಿಬಿಟ್ಟಿದ್ದೆ. ಎಚ್ಚರಾದಾಗ ಕತ್ತಲಾಗಿ ಹೋಗಿದೆ ! ಎಚ್ಚರಾಗಿ ಎದ್ದು ಕುಳಿತಾಗ ಎದೆಯೊಡೆದು ನೀರಾಯಿತು. ಆ ಕಲ್ಲು ಗುಡ್ಡದ ನಡುವೆ ಎದ್ದೆನೋ ಬಿದ್ದೆನೋ ಎನ್ನುವ ಖಬರಿಲ್ಲದೆ ಸತ್ತೆನೋ ಕೆಟ್ಟೆನೋ ಎಂದು ಓಡೋಡಿ ಬಂದಿದ್ದೆ.

ಪರೀಕ್ಷೆ ಹತ್ತಿರ ಬಂತೆಂದರೆ ಸಾಕು. ನಾನು ತಲೆಯ ಕೂದಲನ್ನು ಪೂರ್ಣವಾಗಿ ತೆಗೆಯಿಸಿಕೊಳ್ಳುತ್ತಿದ್ದೆ. ಇದರಿಂದ ತಿರುಗಾಡುವುದಕ್ಕೆ, ಇನ್ನೊಬ್ಬರಿಗೆ ಮುಖ ತೋರಿಸುವುದಕ್ಕೆ ನಾಚಿಕೆಯಾಗುತ್ತಿತ್ತು. ಒಂದೆಡೆ ಹೆಚ್ಚು ಹೊತ್ತು ಕುಳಿತುಕೊಳ್ಳುವುದು ಅನಿವಾರ್ಯವಾಗುತ್ತಿತ್ತು. ಹೀಗಿದ್ದಾಗಲೂ ಊರಲ್ಲಿ ಅವಶ್ಯವಾಗಿ ಹೋಗಬೇಕಾಗಿ ಬಂದಾಗ ತಲೆಗೆ ಟೋಪಿ ಹಾಕಿಕೊಂಡು ಅದರ ಮೇಲೆ ಸ್ಕಾರ್ಫ್ ಸುತ್ತಿಕೊಳ್ಳುತ್ತಿದ್ದೆ. ಪರೀಕ್ಷೆಗೆ ಸಂಬಂಧಿಸಿದ ಪತ್ರಗಳನ್ನು ತರಲು ಕಾಲೇಜಿಗೆ ಹೋಗುವಾಗಲೂ ಇದೇ ರೀತಿ ಮಾಡುತ್ತಿದ್ದೆ. ಆಗ ಗುರುಗಳು; 'ಏನು ಮಾಲಗತ್ತಿ ಮೈಯಾಗ ಆರಾಮಿಲ್ಲೇನು?' ಎಂದು ವಿಚಾರಿಸಿದರೆ ಗತ್ತಿನಿಂದ 'ಹೌದು ಸರ್' ಎನ್ನುತ್ತಿದ್ದೆ. ಏಕೆಂದರೆ ನಿಜವಾದ ಕಾರಣ ಕೊಡಲು ಮನಸ್ಸು ಹಿಂಜರಿಯುತ್ತಿತ್ತು.

**ಅರವಿಂದ ನನ್ನ ಶಿಷ್ಯ, ಜಾತಿಯಲ್ಲೇನಿದೆ ಮಣ್ಣು?**
**ನಾ ಬೆಳೆಸಿದ ಹುಡುಗ. . . . ನನ್ನ ಗುರುತನದ ಕಾಣಿಕೆ –**
**ಯೆಂದು ಬೀಗುವಲ್ಲಿ ನಮನವಿದೆ**

ಕಾಲೇಜಿನ ಪರೀಕ್ಷೆಯ ಓದು ಗಂಭೀರವಾಗಿ ಪ್ರಾರಂಭವಾಗುವುದು, ಪರೀಕ್ಷೆಗೆ ಒಂದೆರಡು ತಿಂಗಳು ಇದೆ ಎನ್ನುವಾಗ. ವಿದ್ಯುತ್ ದೀಪ ಕೇರಿಗೆ ಪ್ರವೇಶವಾಗಿತ್ತು. ಆದರೆ ಇನ್ನೂ ಯಾರ ಮನೆಯೊಳಕ್ಕೂ ಪ್ರವೇಶವಾಗಿರಲಿಲ್ಲ. ಹೀಗಾಗಿ ನಾನು ರಸ್ತೆಯ ವಿದ್ಯುತ್ ದೀಪದ ಬೆಳಕಿನಲ್ಲಿ ಕುಳಿತು ಓದುವ ರೂಢಿ

ಮಾಡಿಕೊಂಡಿದ್ದೆ. ಕೆಲವೊಮ್ಮೆ ವಿದ್ಯುತ್‌ಶಕ್ತಿ ಹೊರಟು ಹೋದಾಗಲೂ ಬುಡ್ಡಿ ಲ್ಯಾಂಪನ್ನು ಹಚ್ಚಿ ಅದೇ ವಿದ್ಯುತ್ ಕಂಬದ ಅಡಿಯಲ್ಲಿಯೇ ಕುಳಿತು ವಿದ್ಯುತ್ತಿನ ನಿರೀಕ್ಷೆಯಲ್ಲಿಯೇ ಓದುವ ವಾಡಿಕೆ ಇತ್ತು.

ಇದ್ದಕ್ಕಿದ್ದಂತೆ ಒಂದು ದಿನ ನಾನು ಓದುವ ಕಂಬದ ದೀಪ ಹತ್ತಲೇ ಇಲ್ಲ. ಆ ಕಂಬ ಅಲುಗಾಡಿಸಿದರೆ ಸಾಕು, ದೀಪ ಹತ್ತುವ ಇಲ್ಲವೇ ನಂದುವ ಸಾಧ್ಯತೆಗಳೂ ಇದ್ದುವು. ಏನೆಲ್ಲಾ ಮಾಡಿದರೂ ದೀಪ ಹತ್ತಲೇ ಇಲ್ಲ. ಬಲ್ಬು ಹೋಗಿದೆ ಎಂದು ಪಂಚಾಯತಿಗೆ ಹೋಗಿ ದೂರು ಸಲ್ಲಿಸಿದೆ. ಮಾರನೆಯ ದಿನ ದೀಪ ಹತ್ತಿತು. ರಾತ್ರಿ ಒಂದು ಗಂಟೆ ಸಮಯದಲ್ಲಿ ನಿದ್ದೆ ಕಳೆಯಲೆಂದು ಸುತ್ತುತ್ತಾ ಹರಕು ಪರದೆಯ ಟೂರಿಂಗ್ ಟಾಕೀಸಿನ ಎಡೆಗೂ ಸುತ್ತಿಬಂದು ನಾಲ್ಕು ಐದು ಗಂಟೆಯವರೆಗೆ ಓದುವ ಅಭ್ಯಾಸವಿತ್ತು.

ಮತ್ತೆರಡು ದಿನಗಳಲ್ಲಿಯೇ ಮತ್ತೆ ಬಲ್ಬು ನಂದಿ ಹೋಯಿತು. ಹೀಗಾದಾಗ ಬುಡ್ಡಿ ಲ್ಯಾಂಪಿನ ಅಡಿಯಲ್ಲಿ ಓದುವುದೂ ಬೇಸರವಾಗುತ್ತಿತ್ತು. ಹದಿನೈದು ದಿನಗಳಲ್ಲಿಯೇ ಹೀಗೆ ಮೂರು ಬಲ್ಬುಗಳು ಹೋದವು. ಪಂಚಾಯತಿಯ ಬಲ್ಬಿಗೆ ಸಂಬಂಧಿಸಿ ಅಧಿಕಾರಿಗಳಿಗೆಲ್ಲಾ ಸಲಾಮು ಹೊಡೆದು ಇನ್ನೊಮ್ಮೆ ಹಾಗೆ ಆಗದ ಹಾಗೆ ನೋಡಿಕೊಳ್ಳುವೆ ಇದೊಂದು ಬಾರಿ ಬಲ್ಬು ಹಾಕಿ ಎಂದು ಅಂಗಲಾಚಿ ಬೇಡಿಕೊಂಡೆ.

**ಏನೋ ಹೀಂಗ ಹೇಳಾಕತ್ತಿ ಎಷ್ಟುಸರೆ ಆಯ್ತು ನೀ?**
**ಓದೀಯೊ? ಇಲ್ಲ ಕಂಬದ ಜೋಡಿ ಆಟಾ ಆಡ್ತೀಯೋ?**

ಎಂದರು ಚೇರಮನ್ನರು.

ಇಲ್ಲಾ ಸರ್, ಆ ಕಂಬದಲ್ಲಿ ಲೈಟಿನ ವಾಯರ್ ಲೂಸ್ ಆಗಿದೆ ಅಂತಾ ಕಾಣ್ತದೆ. ಆ ವಾಯರ್ ಬಿಗಿ ಮಾಡಿಸಿ ಬಲ್ಬು ಹಾಕಿದರೆ ಸರಿಯಾಗಬಹುದು ಸರ್ ಎಂದೆ.

'ಕೆ.ಇ.ಬಿ. ಅವರ ಹತ್ತಿರ ಹೇಳು' ಎಂದರು.

ಕೆ.ಇ.ಬಿ. ಆಫೀಸ್ ಇನ್ನೂ ಬಂದಿರಲಿಲ್ಲ. ಅದರ ಕುರಿತು ಕೆದಕಿ, ಬರಬೇಕಾದ ಒಂದು ಬಲ್ಬು ಕಳೆದುಕೊಳ್ಳುವುದಕ್ಕೆ ಮನಸ್ಸು ಒಪ್ಪದೆ ಮೌನವಾಗಿದ್ದೆ. ಕೊನೆಗೆ ಚೇರಮನ್ನರು 'ಏ ಇದೊಂದು ಸರೆ ಹಾಕಂತ ಹೇಳೋ' ಎಂದು ಹೇಳಿದಾಗ, ಅಲ್ಲಿಂದ ಬೆನ್ನು ತೋರಿದೆ. ಮರುದಿನ ಕಂಬದ ದೀಪ ಹತ್ತಿತು ಎಂದು ಸಂತಸ ಪಟ್ಟೆ. ಅದರಿಂದ ನನ್ನ ಓದಿಗೆ ಅನುಕೂಲವಾಯಿತು.

**ಕವಿ ನೆಲದ ಮೇಲಿರುವುದಿಲ್ಲ**
**ಎಷ್ಟೋ ಬಾರಿ ನೆಲವೆ ಕವಿಯ ಮೇಲಿರುತ್ತದೆ**
**ಕವಿ ಆಕಾಶದ ಮೇಲಿರುತ್ತಾನೆ**
**ತನ್ನೊಂದಿಗೆ ತನ್ನ ಜಗತ್ತನ್ನೂ ಮೇಲಕೆತ್ತುತ್ತಾನೆ . . . . . .**
**ಕವಿ ಮತ್ತೆ ಗೋರಿಯಿಂದ ಮೇಲೇಳುತ್ತಾನೆ**
**ತಾನೇ ದೇವರಾಗುತ್ತಾನೆ ಜನಾರಣ್ಯವೇ ಹೂಬನವಾಗಿ ಅರಳುತ್ತದೆ!**

# ಕರ್ತೃ – ಭಾವ – ಆಕರ



**ಅರವಿಂದ ಮಾಲಗತ್ತಿ** ಅವರು (೧೯೫೬) ಬಿಜಾಪುರ ಜಿಲ್ಲೆ **ಮುದ್ದೇಬಿಹಾಳದವರು.** ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಎಂ.ಎ., ಪಿಎಚ್.ಡಿ. ಪದವಿ ಪಡೆದು ಪ್ರಸ್ತುತ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸಂಶೋಧನೆ ಮತ್ತು ವೈಚಾರಿಕ ಲೇಖನಗಳಿಂದ ಪ್ರಸಿದ್ಧರಾಗಿರುವರಲ್ಲದೇ ಜನಪ್ರಿಯ ಕವಿಯೂ ಆಗಿರುವರು. **ಮೂಕನಿಗೆ ಬಾಯಿ ಬಂದಾಗ, ಕಪ್ಪುಕಾವ್ಯ, ಮೂರನೇ ಕಣ್ಣು, ನಾದ–ನಿನಾದ, ಸಿಲಿಕಾನ್‌ಸಿಟಿ ಮತ್ತು ಕೋಗಿಲೆ, ಚಂಡಾಲ ಸ್ವರ್ಗಾರೋಹಣಂ** ಕವನ ಸಂಕಲನಗಳು. **ಕಾರ್ಯ** ಕಾದಂಬರಿ, **ಮುಗಿಯದ ಕತೆಗಳು** ಕಥಾ ಸಂಕಲನಗಳು. **ಗೌರ್ಮೆಂಟ್ ಬ್ರಾಹ್ಮಣ** ಆತ್ಮಕಥನ. **ಜಾನಪದ ಶೋಧ, ಭೂತಾರಾಧನೆ, ದಲಿತಸಾಹಿತ್ಯ ಚಳವಳಿಯ ತಾತ್ವಿಕ ಚಿಂತನ, ದಲಿತಪ್ರಜ್ಞೆ, ಸಾಹಿತ್ಯ, ಸಮಾಜ ಮತ್ತು ಸಂಸ್ಕೃತಿ** ವಿಮರ್ಶಾತ್ಮಕ ಕೃತಿಗಳು.

**ಮೂಕನಿಗೆ ಬಾಯಿಬಂದಾಗ** ಕವನ ಸಂಕಲನಕ್ಕೆ **ದೇವರಾಜ ಬಹದ್ದೂರ್** ಪ್ರಶಸ್ತಿ, **ಕಪ್ಪು ಕಾವ್ಯ** ಕೃತಿಗೆ **ನರಸಿಂಹಯ್ಯ** ಪುರಸ್ಕಾರ ಹಾಗೂ **ಗೌರ್ಮೆಂಟ್ ಬ್ರಾಹ್ಮಣ** ಕೃತಿಗೆ **ರಾಜ್ಯ ಸಾಹಿತ್ಯ ಅಕಾಡೆಮಿ** ಪ್ರಶಸ್ತಿ ಲಭಿಸಿದೆ.



*   *   *   *

ಜೀವನ ಚರಿತ್ರೆ ಒಂದು ವಿಶಿಷ್ಟ ಪ್ರಕಾರದ ಆತ್ಮಕತೆ. ವ್ಯಕ್ತಿ ತನ್ನ **ಜೀವನ ವಿವರವನ್ನು** ಸ್ವತಃ ಬರೆದು ದಾಖಲಿಸುವುದೇ **ಆತ್ಮಕತೆ.** ಬದುಕಿನ ಸಿಹಿ ಕಹಿಗಳೆರಡನ್ನೂ ಸ್ವತಂತ್ರವಾಗಿ ಮನಬಿಚ್ಚಿ ಹೇಳುವ ಅನುಭವ ನಿರೂಪಣೆ. ಸಿಂಹಾವಲೋಕನ ಕ್ರಮದಲ್ಲಿ ಸಾದರಪಡಿಸುವ ಸ್ಮೃತಿಚಿತ್ರಗಳೇ ಆತ್ಮಕತೆ!

**ಅರವಿಂದ ಮಾಲಗತ್ತಿ** ಅವರು ಪ್ರಾಧ್ಯಾಪಕರಾಗಿ. ಸಾಹಿತಿಯಾಗಿ ವಿಶೇಷವಾಗಿ ದಲಿತ ಸಂವೇದನೆ ಮತ್ತು ಅನುಭವವನ್ನು ಅತ್ಯಂತ ಸೂಕ್ಷ್ಮವಾಗಿ ದಾಖಲಿಸುವವರು. ಆತ್ಮಕತೆಯಿಂದ ಅವರ ಬಾಲ್ಯ, ವ್ಯಾಸಂಗ ಜೀವನ ಹಾಗೂ ಪರಿಸರವನ್ನು ಅರಿಯಲು ಸಾಧ್ಯವಾಗಿದೆ. ಸಾಧಕರೊಬ್ಬರು ನಡೆದುಬಂದ ದಾರಿಯನ್ನು ತಿಳಿಯುವುದರಿಂದ ಸಾಧನಾ ಮಾರ್ಗದಲ್ಲಿ ಎಂತಹ ಎಡರುತೊಡರುಗಳು ಬಂದರೂ ಛಲ ಬಿಡದೆ ಮುನ್ನುಗ್ಗಬೇಕೆಂಬ ತಿಳಿವನ್ನು ಪಡೆಯಲಿ ಎಂಬುದೇ ಪ್ರಕೃತ ಗದ್ಯ ಭಾಗದ ಉದ್ದೇಶ. ಬಾಲ್ಯದ ಒಂದು ಭಾಗವನ್ನು ಮಾತ್ರ ಪರಿಚಯಿಸಿದೆ.

*   *   *   *

ಪ್ರಕೃತ **ಇತಿಹಾಸದ ಚಕ್ಕಡಿ** ಆತ್ಮಕಥನದ ಭಾಗವನ್ನು **ಅರವಿಂದ ಮಾಲಗತ್ತಿ** ಅವರ ಆತ್ಮಕಥನ **ಗೌರ್ಮೆಂಟ್ ಬ್ರಾಹ್ಮಣ(ಪುಟ ೪೦–೪೩) ಮತ್ತು ಆಯ್ದ ಕವಿತೆಗಳು** ಪುಸ್ತಕದಿಂದ ಆರಿಸಿ ಸಂಪಾದಿಸಿ ಸಂಯೋಜಿಸಿ ನಿಗದಿಪಡಿಸಿದೆ.

## ಪದ–ಗದ್ಯಾರ್ಥ

ಕದನ–ಸಂಘರ್ಷ; ಅಹಂ–ಜಂಬ; ಕೇರಿ–ಮನೆಗಳ ಸಾಲು ; ಪ್ರೇರೇಪಿಸು–ಉತ್ತೇಜಿಸು, ಹಂಗಿಸು–ಮೂದಲಿಸು, ಪಾಸಾಗು–ಉತ್ತೀರ್ಣನಾಗು ; ತಾಣ–ನೆಲೆ ; ಖಬರು– ಅರಿವು ; ಗತ್ತು–ಠೀವಿ, ವಾಡಿಕೆ–ಪದ್ಧತಿ; ಅಂಗಲಾಚು–ಮೊರೆಯಿಡು.

## ಪಠ್ಯಾಧಾರ ಟಿಪ್ಪಣಿ

**ಆರಾಮಿಲ್ಲ:** ಆರೋಗ್ಯ ಸರಿಯಿಲ್ಲ, ಅನಾರೋಗ್ಯ

**ಟೂರಿಂಗ್‌ಟಾಕೀಸ್:** ಸಂಚಾರಿ ಚಿತ್ರಮಂದಿರ

**ಚೌಕಟ್ಟ್ಯಾಗ:** ಸಾಧನೆ ಮಾಡಿದವರ ಫೋಟೋ ಪತ್ರಿಕೆಯಲ್ಲಿ ಬರುವುದು

**ಪಂಚಾಯಿತಿ:** ಗ್ರಾಮದ ಆಡಳಿತ ನಡೆಸುವ ಐದು ಸದಸ್ಯರುಳ್ಳ ಸ್ಥಳೀಯ ಸಂಸ್ಥೆ

**ಕೆ. ಇ. ಬಿ.:** ಕರ್ನಾಟಕ ಎಲೆಕ್ಟ್ರಿಕಲ್ ಬೋರ್ಡ್ [ಕರ್ನಾಟಕ ರಾಜ್ಯ ವಿದ್ಯುಚ್ಛಕ್ತಿ ನಿಗಮ]

**ಪಿಎಚ್.ಡಿ.:** Philosophiae Doctor [Ph.D]



## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು :**

**ಅ. ಬಿಟ್ಟಿರುವ ಜಾಗವನ್ನು ಸೂಕ್ತಪದದಿಂದ ತುಂಬಿ.**

೧. ಪದ್ಮಾವತಿ ಗುಡ್ಡದಲ್ಲಿ ____________ ಕಲ್ಲು ಹೆಸರುವಾಸಿ.

೨. ಚೌಕಟ್ಟ್ಯಾಗ ಎಂದರೆ ____________ ಅರ್ಥ.

೩. ಕವಿ ಮತ್ತೆ ________ ಮೇಲೇಳುತ್ತಾನೆ.

೪. ಹಗಲಿನ ಓದಿಗಿಂತ ____________ ಓದು ಹೆಚ್ಚು ಪ್ರಿಯವಾದುದು.

೫. ಇತಿಹಾಸದ ಚಕ್ಕಡಿ ಗದ್ಯಪಾಠದ ಆಕರ ಗ್ರಂಥ ____________.

**ಆ. ಕೊಟ್ಟಿರುವ ಪದಗಳಲ್ಲಿ ಆಯಾ ಗುಂಪಿಗೆ ಸೇರದ ಪದವನ್ನು ಆರಿಸಿ ಬರೆಯಿರಿ**

೧. ಕಪ್ಪುಕಾವ್ಯ ನಾದನಿನಾದ ಮೂಕನಿಗೆ ಬಾಯಿ ಬಂದಾಗ ಕಾರ್ಯ

೨. ಗುಡ್ಡಕ್ಕೆ ಸ್ಥಳಕ್ಕೆ ನರ್ತನದ ಮನೆಗೆ

| | | | | |
|---|---|---|---|---|
| ೩. | ಬಂತೆಂದರೆ | ಇನ್ನೊಬ್ಬರಿಗೆ | ಅಡಿಯಲ್ಲಿ | ಹೀಗಾದಾಗ |
| ೪. | ಅ | ರ | ಇ | ಏ |

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯಗ್ರಹಿಕಾ ಪ್ರಶ್ನೆಗಳು**

**ಅ. ಕೊಟ್ಟಿರುವ ವಾಕ್ಯಗಳಿಗೆ ಸಂದರ್ಭ ಸಹಿತ ಸ್ವಾರಸ್ಯವನ್ನು ಬರೆಯಿರಿ**

೧. "ನಾಳೆ ಇಂವ ಚೌಕಟ್ಯಾಗ ಬರ್ತಾನಪ್ಪ"

೨. "ಎಚ್ಚರಾಗಿ ಎದ್ದು ಕುಳಿತಾಗ ಎದೆಯೊಡೆದು ನೀರಾಯಿತು"

೩. "ಮೈಯಾಗ ಆರಾಮಿಲ್ಲೇನು?"

೪. "ಓದೀಯೊ ಇಲ್ಲ ಕಂಬದ ಜೋಡಿ ಆಟಾ ಆಡ್ತೀಯೋ?"

೫. "ಆ ವಾಯರ್ ಬಿಗಿ ಮಾಡಿಸಿ ಬಲ್ಬು ಹಾಕಿದರೆ ಸರಿಯಾಗಬಹುದು ಸರ್"

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ಪದ್ಮಾವತಿ ಗುಡ್ಡದಲ್ಲಿ ಲೇಖಕರು ಓದಲು ಮಾಡಿದ ಪ್ರಯತ್ನವನ್ನು ವಿವರಿಸಿ.

೨. ವಿದ್ಯುತ್‌ದೀಪದ ಬೆಳಕನ್ನು ಪಡೆಯಲು ಲೇಖಕರು ಎದುರಿಸಿದ ಸವಾಲುಗಳಾವುವು?

೩. ಆತ್ಮಕಥನದ ಮಹತ್ವವನ್ನು ವಿವರಿಸಿ.



**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು/ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ**

೧. ಪದ್ಮಾವತಿ ಗುಡ್ಡದ ವಿಶೇಷತೆ ಏನು?

೨. ಓದಿನ ದಿನಗಳಲ್ಲಿ ಕೇರಿಯ ಜನರು ಮಾಲಗತ್ತಿಯವರನ್ನು ಏನೆಂದು ಹಂಗಿಸುತ್ತಿದ್ದರು?

೩. ಪದ್ಮಾವತಿ ಗುಡ್ಡದಿಂದ ಮಾಲಗತ್ತಿಯವರು ಗಾಬರಿಯಿಂದ ಓಡಿಬರಲು ಕಾರಣವೇನು?

೪. ಮಾಲಗತ್ತಿಯವರು ಪೂರ್ಣ ತಲೆಕೂದಲು ತೆಗೆಯಿಸುತ್ತಿದ್ದುದು ಏಕೆ? ಅದನ್ನು ಹೇಗೆ ನಿರ್ವಹಿಸುತ್ತಿದ್ದರು?

೫. ಮಾಲಗತ್ತಿಯವರಿಗೆ ಬೀದಿ ದೀಪದ ಕೆಳಗೆ ಕುಳಿತು ಓದುವ ಅಭ್ಯಾಸ ಹೇಗೆ ಆಯಿತು?

**ಈ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ಮಾಲಗತ್ತಿಯವರ ಓದು ಯಾವಾಗ ಇರುತ್ತಿತ್ತು?

೨. ಮಾಲಗತ್ತಿಯವರ ಓದಿನ ಆತ್ಮೀಯ ಸ್ಥಳ ಯಾವುದು?

೩. ಇಟ್ಟಪ್ಪ ಯಾರು?

೪.  ಮಾಲಗತ್ತಿಯವರಿಗೆ ಹೆಮ್ಮೆಯಾದ ಸಂಗತಿ ಯಾವುದು?

೫.  ಮಾಲಗತ್ತಿಯವರು ರಾತ್ರಿ ಓದಿಗೆ ಬದ್ಧರಾಗಲು ಕಾರಣ ಏನು?

## ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**

**ಸಂಧಿ ಮುಂದುವರಿದುದು**

**ವೃದ್ಧಿಸಂಧಿ**

**– ಅವನು ಏಕೈಕ ವೀರ**

ಇಲ್ಲಿರುವ ಏಕೈಕ ಪದವನ್ನು ಗಮನಿಸಿ.

**ಏಕ + ಏಕ > ಏಕೈಕ**

**ಕ್ + ಅ + ಏ > ಕ್ + ಐ**

ಇಲ್ಲಿ ಪೂರ್ವಪದದ ಅಂತ್ಯದಲ್ಲಿರುವ **ಅ** ಕಾರಕ್ಕೆ ಪರಪದದ ಆದಿಯಲ್ಲಿರುವ **ಏ** ಕಾರವು ಪರವಾಗಿ ಸಂಧಿಯಾದಾಗ **ಐ** ಕಾರವು ಆದೇಶವಾಗಿ ಬರುತ್ತದೆ.

**ಸೂತ್ರ :** ಅ ಆ ಕಾರಗಳಿಗೆ ಏ ಐ ಕಾರಗಳು ಪರವಾದಾಗ ಅವೆರಡರ ಸ್ಥಾನದಲ್ಲಿ ಐ ಕಾರವೂ ಓ ಔ ಕಾರಗಳು ಪರವಾದಾಗ ಔ ಕಾರವೂ ಆದೇಶವಾಗಿ ಬಂದರೆ (ಐ, ಔ ಕಾರಗಳು ಆದೇಶವಾಗಿ ಬಂದಾಗ) ಅದೇ **ವೃದ್ಧಿಸಂಧಿ.**

ಉ.ದಾ.: **ಲೋಕೈಕ   ಜನೈಕ್ಯ   ಜಲೌಘ   ವನೌಷಧಿ** ಇತ್ಯಾದಿ.



**ಯಣ್‌ಸಂಧಿ**

ಸಂಸ್ಕೃತ ವ್ಯಾಕರಣದಲ್ಲಿ ಕೆಲವು ಸಂಜ್ಞೆಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳಲ್ಲಿ **ಯಣ್** ಎಂಬ ಸಂಜ್ಞೆಯೂ ಒಂದು. **ಯ್ ರ್ ಲ್ ವ್** ಎಂಬ ನಾಲ್ಕು ವ್ಯಂಜನಗಳನ್ನು **ಯಣ್** ಅಕ್ಷರಗಳೆಂದು ಗುರುತಿಸಲಾಗಿದೆ. ಸಂಧಿಯಾಗುವಾಗ **ಯಣ್** ಅಕ್ಷರಗಳಲ್ಲಿ ಯಾವುದಾದರೂ ಒಂದು ಅಕ್ಷರ ಆದೇಶವಾಗಿ ಬಂದರೆ ಅದೇ **ಯಣ್‌ಸಂಧಿ.**

– ಅವನು **ಅತ್ಯಂತ** ಪರಾಕ್ರಮಿ

ಈ ವಾಕ್ಯದಲ್ಲಿರುವ **ಅತ್ಯಂತ** ಎಂಬ ಪದವನ್ನು ಗಮನಿಸಿ.

**ಅತಿ + ಅಂತ > ಅತ್ಯಂತ**

**ತ್ + ಇ + ಅಂ > ತ್ + ಯ್ + ಅಂ**

ಇಲ್ಲಿ ಪೂರ್ವಪದದ ಅಂತ್ಯದಲ್ಲಿರುವ ಇ ಕಾರಕ್ಕೆ ಪರಪದದ ಆದಿಯಲ್ಲಿರುವ **ಅಂ** ಕಾರ ಸೇರಿ ಸಂಧಿಯಾದಾಗ ಇ ಕಾರದ ಬದಲಿಗೆ **ಯ್** ಕಾರ ಆದೇಶವಾಗಿದೆ.

**ಸೂತ್ರ :** ಇ **ಈ** ಕಾರಗಳಿಗೆ **ಯ್** ಕಾರವೂ **ಉ ಊ** ಕಾರಗಳಿಗೆ **ವ್** ಕಾರವೂ **ಋ** ಕಾರಕ್ಕೆ **ರ್** ಕಾರವೂ ಆದೇಶವಾಗಿ ಬಂದರೆ ಅದು **ಯಣ್‌ಸಂಧಿ.**

**ಉ.ದಾ: ಅತ್ಯವಸರ ಜಾತ್ಯತೀತ ಕೋಟ್ಯಧೀಶ ಪ್ರತ್ಯುತ್ತರ ಮನ್ವಾದಿ ಪಿತ್ರಾರ್ಜಿತ ಇತ್ಯಾದಿ**

**ಸಮಾಸ ಮುಂದುವರಿದುದು :**

## ದ್ವಂದ್ವಸಮಾಸ

**ಕೆರೆಯೂ ಕಟ್ಟೆಯೂ ಬಾವಿಯೂ – ಕೆರೆಕಟ್ಟೆಬಾವಿಗಳು**
**ಆನೆಯೂ ಕುದುರೆಯೂ ಒಂಟೆಯೂ – ಆನೆಕುದುರೆಒಂಟೆಗಳು**
**ಗಿಡವೂ ಮರವೂ ಬಳ್ಳಿಯೂ – ಗಿಡಮರಬಳ್ಳಿಗಳು**

ಈ ಉದಾಹರಣೆಗಳನ್ನು ಗಮನಿಸಿದಾಗ ಬೇರೆ ಸಮಾಸಗಳಲ್ಲಿದ್ದಂತೆ ಪೂರ್ವಪದ ಮತ್ತು ಪರಪದ ಎಂಬ ವಿಭಾಗಗಳು ಇಲ್ಲವೆಂಬುದು ಗೋಚರಿಸುತ್ತದೆ. ಅಲ್ಲದೆ ಅರ್ಥ ಪ್ರಾಧಾನ್ಯದಲ್ಲೂ ಒಂದೇ ಪದಕ್ಕೆ ಅಂದರೆ ಪೂರ್ವಪದ ಅಥವಾ ಪರಪದಕ್ಕೆ ಸೀಮಿತವಾಗಿಲ್ಲದೆ ಎಲ್ಲಾ ಪದಗಳ ಅರ್ಥವೂ ಪ್ರಧಾನವಾಗಿರುತ್ತದೆ.

**ಸೂತ್ರ : ಎರಡು ಅಥವಾ ಅನೇಕ ನಾಮಪದಗಳು ಸಹಯೋಗ ತೋರುವಂತೆ ಸೇರಿ ಎಲ್ಲಾ ಪದಗಳ ಅರ್ಥವೂ ಪ್ರಧಾನವಾಗಿ ಇರುವ ಸಮಾಸವೇ ದ್ವಂದ್ವಸಮಾಸ.**

ಉದಾ.: **ಗುಡುಗು ಸಿಡಿಲು ಮಿಂಚುಗಳು, ಗಿರಿವನ ದುರ್ಗಗಳು**
**ಸೂರ್ಯ ಚಂದ್ರ ನಕ್ಷತ್ರಗಳು, ಕರಿ ತುರಗ ರಥಗಳು ಇತ್ಯಾದಿ**



## ಭಾಷಾ ಚಟುವಟಿಕೆ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ.**

೧. ವೃದ್ಧಿಸಂಧಿ ಎಂದರೇನು? ನಿದರ್ಶನ ಸಹಿತ ಬರೆಯಿರಿ.

೨. ದ್ವಂದ್ವಸಮಾಸಕ್ಕೆ ನಿದರ್ಶನ ನೀಡಿ.

೩. ಯಣ್‌ಸಂಧಿ ಎಂದರೇನು? ಉದಾಹರಣೆ ಸಹಿತ ವಿವರಿಸಿ.

## ಪೂರಕ ಓದು

- **ಅರವಿಂದ ಮಾಲಗತ್ತಿ** ಅವರ **ಗೌರ್ಮೆಂಟ್‌ಬ್ರಾಹ್ಮಣ** ಆತ್ಮಕಥನ ಪುಸ್ತಕವನ್ನು ಸಂಗ್ರಹಿಸಿ ಓದಿ
- **ಎಚ್.ಎಸ್. ರಾಘವೇಂದ್ರರಾವ್** ಅವರು ಸಂಪಾದಿಸಿರುವ **ಅರವಿಂದ ಮಾಲಗತ್ತಿ ಅವರ ಆಯ್ದ ಕವಿತೆಗಳು** ಕೃತಿಯನ್ನು ಅವಲೋಕಿಸಿ.

# ಗದ್ಯಪಾಠ – ೦೮

# ಅಚ್ಚರಿಯ ಜೀವಿ ಇಂಬಳ

## [ವೈಜ್ಞಾನಿಕ ಪ್ರಬಂಧ]

– ಪಿ. ಸತ್ಯನಾರಾಯಣಭಟ್

### ಮುನ್ನೆಯಾರಿ

ಅಮೂರ್ತವಾದುದನ್ನು ಸಹಜವಾಗಿ ಮೂರ್ತೀಕರಿಸುವ ವಿಧಾನ, ವಿಶೇಷವೇ ವಿಜ್ಞಾನ. ಅಂದರೆ ಭೌತ ಜಗತ್ತಿನ ಸಮಸ್ತವನ್ನೂ ವ್ಯವಸ್ಥಿತ ರೀತಿಯಲ್ಲಿ ಇಂದ್ರಿಯ ಗೋಚರತೆಗೆ ಒಳಪಡಿಸುವ ಶಾಸ್ತ್ರೀಯ ವಿಧಾನವೇ ವಿಜ್ಞಾನ. ಈ ತೆರನಾದ ವಿಚಾರಗಳನ್ನು ನಿರ್ದಿಷ್ಟ ನಿರ್ಣಾಯಕ ನೆಲೆಯಲ್ಲಿ ತಾತ್ವಿಕ ನಿದರ್ಶನಗಳೊಂದಿಗೆ ನಿರೂಪಿಸುವ ಲೇಖನಗಳೇ ವೈಜ್ಞಾನಿಕ ಪ್ರಬಂಧಗಳು. ಪ್ರತಿಯೊಂದು ಅಂಶವೂ ವೈಜ್ಞಾನಿಕ, ತಾಂತ್ರಿಕ, ಗಣಿತೀಯ ನೆಲೆಯಲ್ಲಿ ಮೂಡಿರುತ್ತದೆ. ಅಂತಹ ಪ್ರಬಂಧಗಳಲ್ಲಿ ಪ್ರಸ್ತುತ ಗದ್ಯಪಾಠವೂ ಒಂದಾಗಿದೆ.

ಅವನೆಂತಾ ಜಿಗಣೆ ಮಾರಾಯಾ, ಕಚ್ಚಿಕೊಂಡ್ರೆ ಬಿಡೋದೇ ಇಲ್ಲ – ಮಾತು ಕೇಳಿದ್ದೀರಿ. ಏನಾದ್ರೂ ಸಂಗತಿ ಹಿಡಿದುಕೊಂಡು ಅದನ್ನೇ ಪಟ್ಟಾಗಿ ಹಿಡಿದು ವಾದಿಸುವ ಮಂದಿ ಇದ್ದಾರೆ. ಅದನ್ನೇ ಸಾಧಿಸುವ ಛಲಗಾರರಿದ್ದಾರೆ. ಅಂತಹ ಮಂದಿಗೆ ಜಿಗಣೆ ಎನ್ನುತ್ತಾರೆ. ಅದು ನಿರುಪದ್ರವಿ, ಉಪಕಾರಿ ಜೀವಿ. ಇಂಬಳ ಎಂದರೂ ಅದೇ. ಇಂತಹ ಜೀವಿ ಇಂದು ನೆರೆ ದೇಶದಿಂದ ಭಾರತಕ್ಕೆ ಆಮದಾಗುತ್ತಿದೆ. ಏಕೆ, ಎಲ್ಲಿ ಮತ್ತು ಹೇಗೆ? ಎಂಬುದನ್ನು ತಿಳಿಯೋಣ.



### ಅರ್ಥೈಸಿ – ಓದಿ

| | | | | |
|---|---|---|---|---|
| ಕಿರ್ಯಾಡಿ | ಎರೆಹುಳ | ಜವುಗು | ಚಾರಣ | ಪಾವರಿ |
| ಯಾನೆ | ಘಟ್ಟ | ಜೀರ್ಣಾಂಗ | ಗ್ಯಾದರರ್ | ಜಲೂಕ |
| ಸಿರೆ | ಥೆರಪಿ | ಹಿರುಡಿನ್ | ಝೋಂಕ್‌ಲಗಾನಾ | |

### ನಿಗದಿತ ಮೂಲ ವೈಜ್ಞಾನಿಕ ಪ್ರಬಂಧ



ಇಂಗ್ಲೆಂಡಿನಲ್ಲಿ ಚಳಿಗಾಲದ ಚುಮುಚುಮು ನಸುಕಿನ ಹೊತ್ತು. ಒಂದು ಚರ್ಮದ ಕೈಚೀಲ ಹಿಡಿದ ಒಬ್ಬ ಹಣ್ಣು ಹಣ್ಣು ಮುದುಕ ಕವಿ ವರ್ಡ್ಸ್‌ವರ್ತ್‌ಗೆ ಎದುರಾಗುತ್ತಾನೆ. ಜಿಗಣೆ ಸಂಗ್ರಹ ಕಾಯಕದ ಈ ಮುದುಕನ ಕುರಿತು 'ಜಿಗಣೆ ಹಿಡುಕ' (Leach gatherer) ಕವಿತೆ ಹುಟ್ಟುತ್ತದೆ. ಮುದುಕನ ಸಂಕಷ್ಟ, ಬಡತನ, ಜಿಗಣೆ ಸಂಗ್ರಹ ವೃತ್ತಿಯ ಸಕಲ ಸಂಗತಿ ಆ ಕವನದಲ್ಲಿ ಬಿತ್ತರಗೊಳ್ಳುತ್ತದೆ.

ಕವಿ ವರ್ಡ್ಸ್‌ವರ್ತ್‌ನಂತೆ ನಾನೇನೂ ಇಂಬಳದ ಕವನ ಬರೆಯ ಹೊರಟಿಲ್ಲ. ಅಂತಹ ವಿಚಿತ್ರ ಜೀವಿಯನ್ನು ನಾನು ಮೊದಲ ಬಾರಿ ಕಂಡದ್ದು ಧರ್ಮಸ್ಥಳ ಪರಿಸರದ ಉಜಿರೆಯ ಹತ್ತಿರದ ಕೆರೆಯ ಬಳಿ. ಯುಗಾದಿಯ ಸಂದರ್ಭ. ಅದು ಕಿರ್ಯಾಡಿ ಕೆರೆ. ಗೋಪಾಲಕೃಷ್ಣ ದೇಗುಲದ ಕೆರೆ. ವಿಶಾಲ ಕೆರೆಯಂಚಿನಲ್ಲಿ ಸೂಜಿ ಮೊನೆಯಾಕಾರದ ಎರೆಹುಳದಂತಿರುವ ವಿಚಿತ್ರ ಜೀವಿ ಕಂಡೆ. ನನಗಾಗ ಹತ್ತು ವರ್ಷ. ಅಮ್ಮ ಅದನ್ನು ಪಾವರಿ ಎಂದು ತುಳು ಹೆಸರಿನಿಂದ ಕರೆದು ಗುರುತಿಸಿದರು. ಪಾವ್ ಎಂದರೆ ಹಾವು ಎಂದರ್ಥ. ಇದು ತುಳು ಮೂಲವಿದ್ದೀತು. ಅಂತಹ ಪದ ಇಂದು ತುಳು ಭಾಷೆಯಿಂದ ಮಾಯವಾಗಿದೆ. ಹಾಗೆಯೇ ನೀರಿನ ಆಸರೆ, ಜವುಗು ಕಣ್ಮರೆಯಾದರೆ ಇಂಬಳ ಸಹ ಕಾಣೆಯಾಗುತ್ತದೆ. ಮತ್ತೊಮ್ಮೆ ಕಕ್ಕಿಂಜೆ, ಚಾರ್ಮಾಡಿ ಘಟ್ಟ ಸಾಲಿನ ಚಾರಣ ಸಂದರ್ಭದಲ್ಲಿ ಪೊರಕೆ ಕಡ್ಡಿಯಾಕಾರದ ಪಾವರಿ ಕಾಲನಿ ಕಂಡೆ. ನೂರಾರು ಪಾವರಿಗಳ ರಾಶಿ ರಾಶಿ ಅಲ್ಲಿತ್ತು. ಅಂತಹ ನೆಗೆಯುವ ಪಾವರಿ ಯಾನೆ ಇಂಬಳಗಳು ದಾರಿಹೋಕರನ್ನು ಗಬಕ್ಕನೆ ನೆಗೆದು ಹಿಡಿದು ಬಿಡುತ್ತಿದ್ದವು. ಹೊಟ್ಟೆ ತುಂಬ ನೆತ್ತರು ಹೀರಿ ಎರೆಹುಳದಂತೆ ಗುಂಡನೆ ಗಾತ್ರ ಪಡೆದು ದೇಹದಿಂದ ಕಳಚಿಕೊಳ್ಳುವಂಥವು. ಅಂತಹ ಕಡ್ಡಿ ಇಂಬಳ ಕಾಲನಿಗಳಂತೂ ಅಂದು ಎರಡು ಬಸ್ ಚಾರಣಿಗರಿಗೆ ಮೋಜಿನ ಸಂಗತಿ. ಹಸಿದ ಹೊಟ್ಟೆಯಲ್ಲಿ ಸಂಜೆ ಘಟ್ಟ ಇಳಿಯುವ ಹೊತ್ತಿಗೆ ಒಬ್ಬೊಬ್ಬರೂ ಕನಿಷ್ಟ ಐದಾರು ಇಂಬಳಗಳಿಗೆ ಬಿಟ್ಟಿ ನೆತ್ತರು ದಾನಿಗಳಾಗಿದ್ದರು. ಅಂತಹ ಪುಣ್ಯ ಅಂದು ನಮಗೆ ನಿರಾಯಾಸವಾಗಿ ಒದಗಿತ್ತು.

ಇಂಬಳ ತನ್ನ ಅತಿಥಿಗೆ ಒಮ್ಮೆ ಕಚ್ಚಿದರೆ ಮುಂದಿನ ಕಡಿತಕ್ಕೆ ವರ್ಷಕಾಲದ ಅವಧಿಯ ಅಂತರ. ಅಂತಹ ನಿಧಾನ ಜೀರ್ಣಾಂಗದ ಪರಿ ಸಹ ಅಚ್ಚರಿ. ಅಂತಹ ವಿಚಿತ್ರ ಜೀರ್ಣಾಂಗ ವ್ಯೂಹವೇ ಇಂಬಳದ ವೈಶಿಷ್ಟ್ಯ. ಜಿಗಣೆ ಎಂದರೆ ಮೂಗೆಳೆಯುವ ಮಂದಿಗೆ ಅದರ ಬದುಕಿನ ಬವಣೆ ತಿಳಿದರೆ ಅನುಕಂಪವಾದೀತು. ಬಿಸಿರಕ್ತ ಪ್ರಾಣಿ ದೊರಕದೆ ಇದ್ದರೆ ಅಂತಹ ಜೀವಿಗಳು ಶೀತ ರಕ್ತ ಪ್ರಾಣಿಗಳನ್ನೂ ಹಿಡಿದು ನೆತ್ತರು ಹೀರುತ್ತವೆ. ಮೀನಿನ ಮೊಟ್ಟೆ ತಿನ್ನುತ್ತವೆ. ಮೀನು, ಹಕ್ಕಿ, ಹಾವು, ಮೊಸಳೆ, ಕಪ್ಪೆ, ಆಮೆಯಂತಹ ಪ್ರಾಣಿಗಳನ್ನೂ ಸತಾಯಿಸುತ್ತವೆ. ರಕ್ತ ಹೀರುತ್ತವೆ. ಏನೇನೂ ಸಿಗದೆ ಇದ್ದರೆ ಹಸಿರು ಸಸ್ಯಗಳ ಎಲೆ ರಸ ಹೀರಿ ಬದುಕುವ ಇಂಬಳ ಸಹ ಇವೆ. ಪ್ರಾಣಿ ಸಂಕುಲದ ಸಮತೋಲನಕ್ಕೆ ಇವು ನೆರವಾಗುವ ಉಪಕಾರಿ ಜೀವಿ ಎಂಬುದು ನಿಸ್ಸಂಶಯ. ಕೆರೆ, ತೊರೆ, ನದಿಗಳ ನೀರಿನ ಆರೋಗ್ಯ ಮಟ್ಟ ಕಾಪಾಡಲು ಮತ್ತು ಅಳೆಯಲು ಪಾವರಿಗಳು ಮಾಪಕ ಎಂದು ಪರಿಸರವಿಜ್ಞಾನಿಗಳ ಅಭಿಪ್ರಾಯ. ಜುರಾಸಿಕ್ ಯುಗದ ಶಿಲಾಪಳೆಯುಳಿಕೆಗಳಲ್ಲಿ ಇಂಬಳದ ಪಡಿಯಚ್ಚು ಇದೆಯಂತೆ. ವಿಶ್ವಾದ್ಯಂತ ಸುಮಾರು ಐದು ನೂರು ಬಗೆಯ ಇಂಬಳ ಸಂಬಂಧಿಗಳಿವೆ. ಪ್ರಪ್ರಥಮ ಬಾರಿ ಇಂಬಳಕ್ಕೆ ವೈಜ್ಞಾನಿಕ ಹೆಸರನ್ನು ನೀಡಿದವ ಮತ್ತು ವರ್ಗೀಕರಿಸಿದವ ಕೆರೊಲಸ್ ಲಿನೇಯಸ್. (೧೭೬೧) ಏಷ್ಯಾದ ಪ್ರಮುಖ ಮತ್ತು ಉಪಕಾರಿ ಜಿಗಣೆಯ ವೈಜ್ಞಾನಿಕ ಹೆಸರು ಹಿರುಡೋ ಮೆಡಿಸಿನಾಲಿಸ್.

ಇಂಗ್ಲೆಂಡಿನ ಖ್ಯಾತ ಕವಿ ಬಣ್ಣಿಸಿದ ಲೀಚ್ ಗ್ಯಾದರರ್ ಅಂದು ಲೀಚ್ ಹಿಡಿಯುತ್ತಿದ್ದುದು ಏಕೆ? ಅಂದು ಮತ್ತು ಹಿಂದೆ ಮಾತ್ರ ಅಲ್ಲ. ಇಂದಿಗೂ ಸಹ ಲೀಚ್ ಥೆರಪಿ ಒಂದು ಚಿಕಿತ್ಸಾ ವಿಧಾನ. ದೇಹದ ನೆತ್ತರು ಹೀರಿಸಿ ಅನೇಕ ಬಗೆಯ ಕಾಯಿಲೆ ವಾಸಿ ಮಾಡುವ ಸರಳ ವಿಧಾನ. ಜಿಗಣೆಯ ಸಂಸ್ಕೃತ ಹೆಸರು ಜಲೂಕಾ. ಜಲಜೀವಿಗೆ ಅದು ಸಾರ್ಥಕ ಹೆಸರು. ಎರಡೂವರೆ ಸಾವಿರ ವರ್ಷಗಳ ಹಿಂದೆ ಸುಶ್ರುತರು ಜಿಗಣೆ ಬಳಸಿ ಮೈಕ್ರೋ ಸರ್ಜರಿ ಅರ್ಥಾತ್ ಸೂಕ್ಷ್ಮ ಶಸ್ತ್ರಚಿಕಿತ್ಸೆ ಮಾಡುತ್ತಿದ್ದರು. ಇದಕ್ಕೊಂದು ಉದಾಹರಣೆ: ಎರಡು ವಾರದ ಹಿಂದೆ ಅಂತಾರಾಷ್ಟ್ರೀಯ ವಿಚಾರ ಸಂಕಿರಣ ನಡೆದಿತ್ತು. ಕೋಲಾರ ಸನಿಹದ ಮುಳಬಾಗಲಿನ ಸಂಸ್ಕೃತ ಸಂಸ್ಥಾನದಲ್ಲಿ ಅದು ಜರುಗಿದ್ದು. ಅಲ್ಲಿ ನನ್ನ ಶಿಷ್ಯೆ ಡಾ. ಕವಿತಾ ಒಂದು ಪ್ರೌಢ ಪ್ರಬಂಧ

ಮಂಡಿಸಿದರು. ಒಸಡಿನ ಬೆಂಬಿಡದ ಕಾಯಿಲೆಗೆ, ಒಸಡಿನ ಭಾಗದಲ್ಲಿ ಜಿಗಣೆ ಬಿಟ್ಟು ನೆತ್ತರು ಹೀರಿಸಿ ಕಾಯಿಲೆ ಪರಿಹಾರವಾದ ಸಮಗ್ರ ಮಾಹಿತಿ ತಿಳಿದು ನೆರೆದ ಮಂದಿ ದಂಗಾದರು. ಸಚಿತ್ರ ದಾಖಲೆಗಳನ್ನು ಅಲ್ಲಿ ಪ್ರಸ್ತುತಗೊಳಿಸಿದ ಡಾ. ಕವಿತಾ ಅವರ ಸಾಧನೆ ಮತ್ತು ಜಿಗಣೆಯ ಉಪಕಾರ ಏಕಕಾಲದಲ್ಲಿ ಸ್ತುತಿಗೊಂಡವು. ನಾಣ್ಯದಾಕಾರದ ಕೂದಲುದುರಿದ ಸಮಸ್ಯೆ, ಉಬ್ಬಿದ ಕಾಲುಸಿರೆ(ವೆರಿಕೋಸ್‌ವೆಯಿನ್), ಹಳೆಯ ಗಾಯ ಮತ್ತು ಮೂಲವ್ಯಾಧಿಯ ಅನಂತರದ ಘನ ಘೋರ ಅವಸ್ಥೆಯ ಜರಡಿಹುಣ್ಣುಗಳಲ್ಲಿ ಲೀಚ್ ಥೆರಪಿ ಬಳಸುವ ಮಾಹಿತಿ ನೀಡಿದ್ದು ಸುಶ್ರುತರ ವಿಶೇಷತೆ. ಅದನ್ನು ಅಳವಡಿಸುವ ಕಾಯಕದಲ್ಲಿ ಯಶಸ್ಸು ಗಳಿಸುವುದು ಖಂಡಿತ.

ಯುನಾನಿ ವೈದ್ಯದ ಜನಕ 'ಅವಿಸೆನ್ನ' ಮತ್ತು ಆಧುನಿಕ ವೈದ್ಯದ ಪಿತಾಮಹ ಹಿಪೊಕ್ರೇಟ್ಸ್‌ನಂತಹ ಗ್ರೀಸ್‌ನ ಮೇಧಾವಿಗಳು ಲೀಚ್ ಥೆರಪಿಗೆ ಒತ್ತು ನೀಡಿದರು. ಅದು ಇತ್ತೀಚಿನವರೆಗೆ ಬಳಕೆಯಲ್ಲಿತ್ತು. ಅಮೆರಿಕೆಯಲ್ಲಿ ಎಫ್. ಡಿ. ಎ. ಮದ್ದು ಮತ್ತು ಚಿಕಿತ್ಸೆಯ ವಿಧಾನಕ್ಕೆ ರಹದಾರಿ ನೀಡುವ ಸರಕಾರಿ ಅಧಿಕೃತ ಸಂಸ್ಥೆ ಒಂದಿದೆ. ಅದು ಲೀಚ್ ಥೆರಪಿಗೆ ಅಂಗೀಕಾರ ನೀಡಿದೆ. ವಾಸ್ತವವಾಗಿ ಈ ಸಂಗತಿಯಿಂದ ಲೀಚ್ ಕುಲದ ಉಳಿವಿಗೆ ಒಳಿತೇ ಸೈ. ಏಕೆಂದರೆ ಒಮ್ಮೆ ನೆತ್ತರು ಹೀರಿದ ಇಂಬಳಕ್ಕೆ ಸರಿಯಾಗಿ ಉಪಚರಿಸದೆ ಇದ್ದರೆ ಅದು ಸತ್ತು ಹೋಗುತ್ತದೆ. ಆದರೆ ಮನುಕುಲದ ಸಂಕಟಗಳಿಗೆ ಸುಲಭ ಸೂತ್ರವಾಗಿದ್ದರೂ ಜಾರಿಯಾಗದ ಇಂಬಳ ಚಿಕಿತ್ಸೆ ರೋಗಿಗಳ ಕಷ್ಟ-ನಷ್ಟಗಳ ಸರಮಾಲೆಗೆ ಇಂದು ಇಂಬು. ಕಣ್ಣಿನ ರೆಪ್ಪೆ, ಕಿವಿ, ಒಳಮೂಗು, ಕೈ ಕಾಲಿನ ಬೆರಳು, ಕೊಳೆತು ನಾರುವಹುಣ್ಣು(ಗ್ಯಾಂಗ್ರಿನ್) ಇಂತಹ ಆಯಕಟ್ಟಿನ ಅಪಾಯಕಾರಿ ಶಸ್ತ್ರಚಿಕಿತ್ಸೆಗಳಲ್ಲಿ ಲೀಚ್ ಬಳಕೆ ಖಂಡಿತ ಯಶಸ್ಸಿನದು. ಯಾವುದೇ ಕತ್ತರಿ, ಚಾಕು ಬಳಕೆ ಬೇಡ. ಅರಿವಳಿಕೆ ಅನಗತ್ಯ. ಏಕೆಂದರೆ ಲೀಚ್ ಸ್ವತಃ ತಾನು ಕಚ್ಚುವ ತಾವಿನಲ್ಲಿ ಅರಿವಳಿಕೆ ಉಂಟುಮಾಡುತ್ತದೆ!

ಲೀಚ್ ಹೇಗೆ ರಕ್ತ ಹೀರುತ್ತದೆ ತಿಳಿಯೋಣ. ಅದರ ಬಾಯಿಯ ಕಡೆ ಎರಡು ಹೀರುಕಗಳು ಇವೆ. ಒಂದನ್ನು ಊರಿ ಅದರಿಂದ ನೆತ್ತರು ಹೀರಲು ಪ್ರಾರಂಭಿಸುವುದು. ಇನ್ನೊಂದನ್ನು ಗಾಯದೆಡೆಗೆ ಊರಿ ಅದರಿಂದ ಹಿರುಡಿನ್ ಎಂಬ ರಕ್ತ ಕರಣೆಗಟ್ಟದಂತಹ ರಾಸಾಯನಿಕವನ್ನೊಳಗೊಂಡ ಜೊಲ್ಲನ್ನು ಸ್ರವಿಸುವುದು. ಅದರ ಸಂಪರ್ಕದಿಂದ ತಾತ್ಕಾಲಿಕವಾಗಿ ಗಾಯದ ಆಸುಪಾಸು ಜೋಮು ಹಿಡಿದು ಸ್ಪರ್ಶ ಹಾನಿ ಉಂಟಾಗುತ್ತದೆ. ಸುಮಾರು ಒಂದು ನೂರು ಹರಿತದ ಹಲ್ಲುಗಳಿರುವ ಇಂಬಳ ಕಚ್ಚಿದರೆ ತಿಳಿಯುವುದೇ ಇಲ್ಲ. ಅಂತಹ ಸುವ್ಯವಸ್ಥೆಯ ಕಡಿತ ಅದು!. ಬಿಸಿ ರಕ್ತ ಪ್ರಾಣಿಗಳ ಪೈಕಿ ಜಿಗಣೆಗೆ ಕುದುರೆಯ ನೆತ್ತರು ಎಂದರೆ ಪಂಚಪ್ರಾಣ. ಇದೀಗ ನಿಸರ್ಗದಲ್ಲಿ ಜವುಗು, ಕೆರೆ-ತೊರೆ ಕಮ್ಮಿಯಾಗುತ್ತಿರುವುದರಿಂದ ಜಿಗಣೆ ಸಂತತಿ ಇಳಿಮುಖವಾಗಿದೆ. ಹಾಗಾಗಿ ಕುದುರೆ ಲಾಯಗಳಲ್ಲಿ ಕುದುರೆ ಸಂಗಡ ಲೀಚ್ ಸಾಕುವ ಹೊಸ ವ್ಯವಸಾಯ ಪದ್ಧತಿ ಯೂರೋಪಿನಲ್ಲಿ ಜಾರಿಯಲ್ಲಿದೆ.

ಭಾರತಕ್ಕೆ ನೆರೆದೇಶ ಪಾಕಿಸ್ತಾನದಿಂದ ಜಿಗಣೆ ಆಮದಾಗುತ್ತಿರುವ ಸ್ವಾರಸ್ಯದ ಸಂಗತಿ ನನ್ನ ಕ್ಷೇತ್ರ ಕಾರ್ಯದ ಹೊತ್ತಿನಲ್ಲಿ ಅರಿವಿಗೆ ಬಂತು. ಅದು ಸಂಭವಿಸುತ್ತಿರುವುದು ಸರೋವರಗಳ ತಾಯ್ನಾಡು ಕಾಶ್ಮೀರದ ಶ್ರೀನಗರದ ಹೊರವಲಯದ ಒಂದು ಪುಟ್ಟಹಳ್ಳಿಯಲ್ಲಿ. ಹಳ್ಳಿಯ ಹೆಸರು ತೇಲಬಾಲ್. ಅಲ್ಲೊಬ್ಬ ಲೀಚ್

ಥೆರಪಿಸ್ಟ್. ಆತನ ಹೆಸರು ಕಾಝಿರ್ ಮೊಹಮದ್ ಬಂಗೂ. ಕಾಶ್ಮೀರಿ ಭಾಷೆಯಲ್ಲಿ ಲೀಚ್ ಥೆರಪಿಗೆ **ಝೋಂಕ್ ಲಗಾನಾ** ಎನ್ನುವರು. ಬಂಗೂ ಇದ್ದೆಡೆಗೆ ರೋಗಿಗಳ ದಂಡೇ ಬರುತ್ತದೆ. ನಾನಿದ್ದಾಗ ಮೂವತ್ತರ ಹರೆಯದ ಒಬ್ಬ ಯುವಕ ಬಂದ. ಆತನಿಗೆ ಮೊಣಕಾಲು ಊದಿತ್ತು. ತೀವ್ರ ನೋವಿತ್ತಂತೆ. ಇದೀಗ ಎರಡನೆಯ ಬಾರಿ ಬಂಗೂನ ವಿದೇಶಿ(ಪಾಕಿಸ್ತಾನಿ) ಲೀಚ್‌ಗೆ ಯುವಕನಿಂದ ರಕ್ತದಾನ. ನೋವು ಉಪಶಮನವಾಗಿದೆಯಂತೆ. ಕೇವಲ ಎರಡೇ ಸಿಟ್ಟಿಂಗ್ ಮಾತ್ರ. ಮಾತ್ರೆ ಇಲ್ಲ. ಕಾಸು ಖರ್ಚಿಲ್ಲ. ತೇವದ ಹತ್ತಿ ಉಂಡೆಯಲ್ಲಿ ನಾಕಾರು ಲೀಚ್ ಹಿಡಿದು ಕೋಣೆ ಹೊಕ್ಕ ಉದ್ದನೆಯ ಬಿಳಿಗಡ್ಡದ, ಕುಳ್ಳನೆಯ ಆಳು ಬಂಗೂ. ಆತನ ಅಂಗೈಗೆ ಯುವಕ ಕೇವಲ ಹತ್ತುರೂ ತುರುಕಿದ. ಹತ್ತೇ ನಿಮಿಷದಲ್ಲಿ ಚಿಕಿತ್ಸೆ ಮುಗಿದೇ ಹೋಯಿತು. ಅಂತಹ ಮೊಣಕಾಲಿನ ಉರಿ ಊತದ ರೋಗಿಗೆ ಚುಚ್ಚು ಮದ್ದು ನೀಡಿ ಅರಿವಳಿಕೆ ಮಾಡಿ ಸರ್ಜರಿಯೋ, ನೋಯುತ್ತಿರುವ ಗಂಟಿನ ಒಳಗಣ ದ್ರವವನ್ನು ಕಷ್ಟಪಟ್ಟು ಸಿರಿಂಜಲ್ಲಿ ಹೀರುವ ಚಿಕಿತ್ಸೆಯೋ ನೀಡುವ ಕ್ಲಿಷ್ಟಕರ ಸಂಕೀರ್ಣ ವಿಧಾನದ ಕುರಿತು ನನಗೆ ಅರಿವಿದೆ. ಆದರೆ ಬಂಗೂನ ಸರಳ ಚಿಕಿತ್ಸೆ ಅದ್ಭುತ ಎನಿಸಿತು. ಆತನೇ ಅಭಿನವ ಧನ್ವಂತರಿ ಎಂಬ ಹೆಮ್ಮೆ ನನಗಿದೆ. ಏಕೆಂದರೆ ಧನ್ವಂತರಿಗೆ ನಾಲ್ಕು ಕೈ. ಆತನ ಒಂದು ಕೈಯಲ್ಲಿ ಜಿಗಣೆ ಇದೆ ಎಂದು ಧ್ಯಾನ ಶ್ಲೋಕ ಅರುಹುತ್ತದೆ. ಅಂತಹ ಜಿಗಣೆಯನ್ನೇ ಹಿಡಿದ ಬಂಗೂವಿನ ಕೈಯಲ್ಲಿ ಭವರೋಗ ಹರಿವ ಸರಳ ಸಾಧನ ಇದೆಯಲ್ಲ.

ವಿದೇಶ ಪ್ರವಾಸದಿಂದ ಆಗ ತಾನೇ ಮರಳಿದ್ದೆ. ದೂರದ ದಾಂಡೇಲಿಯ ಕುಳಗಿಯಲ್ಲಿ ಗಿಡಮೂಲಿಕೆಯ ಕ್ಷೇತ್ರಾಧ್ಯಯನ ಕಮ್ಮಟಕ್ಕೆ ದಿಢೀರನೆ ಬುಲಾವ್. ನಿಂತ ಕಾಲಿನಲ್ಲಿಯೇ ಹೊರಟೆ. ಬಲಗಾಲಿನ ಮೊಣಗಂಟು ನೋವಿನ ಬಾಧೆ ನನಗೆ ಕೆಲವಾರು ತಿಂಗಳುಗಳಿಂದ ಕಾಡುತ್ತಿತ್ತು. ಆದರೂ ಲೆಕ್ಕಿಸದೆ ಚುಮುಚುಮು ಚಳಿಯಲ್ಲಿ ರಾತ್ರಿ ಬಸ್ಸಿನಲ್ಲಿ ಪಯಣ. ಮರು ಮುಂಜಾನೆ ಕುಳಗಿಯ ನಿಸರ್ಗ ಶಿಬಿರದಲ್ಲಿ ಎಡೆಬಿಡದ ಚಾರಣ. ಬಲಗಾಲಿನ ಸಾಕ್ಸ್ ಒಳಗೆ ನಾಕಾರು ಜಿಗಣೆಗಳು ಸದ್ದಿಲ್ಲದೆ ಹೊಕ್ಕಿ ಬಿಟ್ಟಿದ್ದವು. ಕಲಿವ, ಕಲಿಸುವ ಗುಂಗಿನಲ್ಲಿ ತಿಳಿದೇ ಇರಲಿಲ್ಲ. ಇಳಿಹೊತ್ತಿನಲ್ಲಿ ನನ್ನ ಪಾದದ ತುದಿಬೆರಳ ಸಂದಿನಿಂದ ಒಂದೇ ಸಮನೆ ನೆತ್ತರ ಧಾರೆ. ಆಗಷ್ಟೇ ತಿಳಿಯಿತು ಲೀಚ್‌ಗಳ ಕೈ ಅಲ್ಲ, ಬಾಯಿ ಚಳಕ. ಒಟ್ಟು ಐದುಲೀಚ್‌ಗಳು ನನ್ನ ಬಲಗಾಲಿಗೇ ದಾಳಿ ಇಟ್ಟು ತಮ್ಮ ಕಾಯಕ ಪೂರೈಸಿ ಉದುರಿದ್ದವು. ಆದರೆ ಅವು ಸುರಿಸಿದ ಹಿರುಡಿನ್ ದೆಸೆಯಿಂದ ನೆತ್ತರ ಧಾರೆ ಹೆಪ್ಪುಗಟ್ಟದೆ ಸುರಿಯುತ್ತಲೇ ಇತ್ತು. ಕುಳಗಿಯ ಐದು ಜಿಗಣೆಗಳು ಸ್ವಯಂ ಪ್ರೇರಣೆಯಿಂದ ನನ್ನ ಬಲಗಾಲಿನ ಸಮಸ್ಯೆಗೆ ಪರಿಹಾರ ಒದಗಿಸಿಬಿಟ್ಟವು. ಈಗ ನನ್ನ ಬಲಗಾಲು ಮಂಡಿ ನೋಯುತ್ತಿಲ್ಲ. ಇದು ಲೀಚ್ ಥೆರಪಿಯ ಪ್ರಭಾವವೇ ಸೈ.



## ಕರ್ತೃ – ಭಾವ – ಆಕರ

**ಪಿ.ಸತ್ಯನಾರಾಯಣಭಟ್** ಅವರು (ಕ್ರಿಸ್ತ ಶಕ ೧೯೫೭) ದಕ್ಷಿಣಕನ್ನಡ ಜಿಲ್ಲೆ ಬೆಳ್ತಂಗಡಿಯವರು. ಆಯುರ್ವೇದವಿಜ್ಞಾನದ ಪದವಿಯನ್ನು ಮೈಸೂರು ವಿಶ್ವವಿದ್ಯಾನಿಲಯದಿಂದಲೂ ಸ್ನಾತಕೋತ್ತರ ಹಾಗೂ ಡಾಕ್ಟರೇಟ್ ಪದವಿಯನ್ನು ಬೆಂಗಳೂರು ವಿಶ್ವವಿದ್ಯಾನಿಲಯದಿಂದಲೂ ಪಡೆದಿದ್ದಾರೆ. ಪರಿಸರವಿಜ್ಞಾನ, ಸಾವಯವ ಕೃಷಿ, ಔಷಧೀಯ ಸಸ್ಯಗಳು, ಜಾನಪದೀಯವಿಜ್ಞಾನ ಇತ್ಯಾದಿ ಇವರಾಸಕ್ತಿ ಕ್ಷೇತ್ರಗಳು. **ಬೆಂಗಳೂರು ಜಿಲ್ಲೆಯ**

**ಬರಿಗಾಲ ವೈದ್ಯರು, ಖಗೇಂದ್ರ ಮಣಿದರ್ಪಣ ಮತ್ತು ಸಸ್ಯ ನಾಮಾವಳಿ** ಇವರ ಕೃತಿಗಳು. ಹಲವು ವೈಜ್ಞಾನಿಕ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದ ಅನುಭವ. ಆಯುರ್ವೇದಿಕ್ ಅಧ್ಯಯನದ ವೃತ್ತಿ ಆರಂಭದೊಡನೆ ಪ್ರಾಧ್ಯಾಪಕರಾಗಿಯೂ ಕಾರ್ಯನಿರ್ವಹಿಸಿದ ಕೀರ್ತಿ ಅವರದು. ನಾಡಿನ ಹತ್ತು ಹಲವು ಸಂಘ ಸಂಸ್ಥೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಹಲವಾರು ರಾಷ್ಟ್ರೀಯ, ಅಂತಾರಾಷ್ಟ್ರೀಯ ಯೋಜನೆಗಳಲ್ಲಿ ನಿರತರಾಗಿರುವರು. ಇವರು ಬಹುಭಾಷಿಕರು. ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿರುವರು.

* * * *

ಅಂಕಣ ಸಾಹಿತ್ಯ ಇಂದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಚಲಿತದಲ್ಲಿರುವ ಸಾಹಿತ್ಯ ಪ್ರಕಾರ. ಪತ್ರಿಕೆಗಳಲ್ಲಿ ಸಾಹಿತ್ಯ, ರಾಜಕೀಯ, ವಿಜ್ಞಾನ, ಕಲೆ, ಅಧ್ಯಾತ್ಮ, ಪರಿಸರ, ವರ್ತಮಾನದ ವಿದ್ಯಮಾನಗಳು ಮುಂತಾದ ವಿಷಯಗಳ ಕುರಿತಂತೆ ಬೇರೆಬೇರೆ ಪ್ರಸ್ತುತ ಸಂದರ್ಭ, ಘಟನೆ, ಸಮಸ್ಯೆ ಕುರಿತಂತಿರುವುದೇ ಅಂಕಣ ಸಾಹಿತ್ಯದ ವಿಷಯಗಳು. ಸಂಬಂಧಿತ ವಿಷಯಗಳ ಕುರಿತಂತೆ ವಿಶೇಷ ಬೆಳಕನ್ನು ಬೀರುತ್ತವೆ. ಪ್ರಚಲಿತ ಘಟನೆ, ಸಂದರ್ಭ ಕುರಿತು ಜನರ ಮನಸೆಳೆಯ ಬಲ್ಲ ಚಿಕ್ಕ- ಬರೆಹಗಳೇ ಅಂಕಣ ಬರೆಹಗಳು. ಇವು ನಿರಂತರ ಪತ್ರಿಕೆಗಳಲ್ಲಿ ನಿಗದಿತ ದಿನದಂದು ಪ್ರಕಟವಾಗುವ ಲೇಖನ ಮಾಲೆ. ಆ ಪ್ರಕಾರದ ಲೇಖನಗಳ ಕಣಜ **ಪೃಥಿವೀಸೂಕ್ತ.**

* * * *

ಪ್ರಕೃತ **ಅಚ್ಚರಿಯ ಜೀವಿ ಇಂಬಳ** ಗದ್ಯಪಾಠವನ್ನು **ಪಿ.ಸತ್ಯನಾರಾಯಣಭಟ್** ಅವರ **ಪೃಥಿವೀಸೂಕ್ತ** ಕೃತಿಯಿಂದ ಆಯ್ದು ಸಂಪಾದಿಸಿ ನಿಗದಿಪಡಿಸಿದೆ.



## ಪದ-ಗದ್ಯಾರ್ಥ

ಜಿಗಣೆ - ಇಂಬಳ, ಅಟ್ಟೆ, ಇಂಬಳು, ಚಿಗುಳೆ, ಇಂಬುಡು, ಜಿಡುಕ (ದ.ಕ.): ಕೆರೆಯಂಚು- ಕೆರೆಯಬದಿ, ದಡ; ಪಾವ್(ಹಳೆಗನ್ನಡ)-ಹಾವು (ಹೊಸಗನ್ನಡ); ಪಾವರಿ - ಜಿಗಣೆ; ಕಾಲನಿ (ಆಂಗ್ಲಪದ)- ಬಡಾವಣೆ; ಬಿಟ್ಟಿ-ಉಚಿತ; ಮೂಗೆಳೆ-ಉಪೇಕ್ಷಿಸು; ಸತಾಯಿಸು(ಹಿಂದಿ)-ಕಾಡಿಸು, ತೊಂದರೆಕೊಡು; ಸಿರೆ -ಸಿರ, ರಕ್ತನಾಳ, ನರ; ರಹದಾರಿ-ಅನುಮತಿ ; ಕರಣಿಗಟ್ಟು-ಹೆಪ್ಪುಗಟ್ಟು; ಜೋಮು- ಅರಿವಳಿಕೆಯಾದಂತಾಗು; ಸ್ರಾವ-ಸುರಿ; ಉಪಶಮನ-ಗುಣವಾಗು; ನಾಕಾರು-ನಾಲ್ಕು (ನಾಕು) + ಆರು, ಹಲವು; ಸರ್ಜರಿ (ಆಂಗ್ಲಪದ)-ಶಸ್ತ್ರಚಿಕಿತ್ಸೆ; ಸಿರಿಂಜ್(ಆಂಗ್ಲಪದ)-ಪಿಚಕಾರಿ; ಕ್ಲಿಷ್ಟ-ಕಠಿಣ, ನೋಯಿಸಲ್ಪಟ್ಟ; ಸಂಕೀರ್ಣ- ಇಕ್ಕಟ್ಟಾದ, ತೊಡಕಿನ; ಅಭಿನವ-ಹೊಸ ; ಸಾಕ್ಸ್ (ಆಂಗ್ಲಪದ)-ಕಾಲುಚೀಲ

## ಪಠ್ಯಾಧಾರ ಟಿಪ್ಪಣಿ

**ಮಾರಾಯ** : ಇದು ಸಾಮಾನ್ಯವಾಗಿ ಸಲುಗೆಯಿಂದ ಗೆಳೆಯ ಮೊದಲಾದವರನ್ನು ಕರೆಯುವ ಪದ. ಹೆಚ್ಚಾಗಿ ಇದು ಕರಾವಳಿ ಜಿಲ್ಲೆಗಳಲ್ಲಿ ಬಳಕೆಯಲ್ಲಿದೆ.

**ಜವುಗು** : ಯಾವಾಗಲೂ ನೀರು ನಿಂತಿರುವ ನೆಲ, ಸವುಳು ಭೂಮಿ.

**ಚಾರಣ** : ಕಾಲ್ನಡಿಗೆಯಲ್ಲಿ ಗುಡ್ಡಬೆಟ್ಟ ಮುಂತಾದವುಗಳಲ್ಲಿ ಸಂಚರಿಸುವುದು. (ಚಾರಣ ಮಾಡುವವ ಚಾರಣಿಗ)

**ಸುಶ್ರುತ** : ಪುರಾತನ ಭಾರತದ ಆಯುರ್ವೇದ ವೈದ್ಯ, ಶಸ್ತ್ರಚಿಕಿತ್ಸೆಯ ಜನಕ

**ಎಫ್.ಡಿ.ಎ.** : ಫುಡ್ ಎಂಡ್ ಡ್ರಗ್ಸ್ ಎಡ್ಮಿನಿಸ್ಟ್ರೇಶನ್

**ಅರಿವಳಿಕೆ:** ಅರ್ಧ ವೇದನ ಪ್ರತಿಬಂಧಿ, ಅರಿವನ್ನು ಅಳಿಸುವ (ಅನಸ್ತೇಶಿಯಾ), ಸ್ಪರ್ಶ ಅಥವಾ ನೋವನ್ನು ಗೊತ್ತಾಗದಂತೆ ಮಾಡಲು ಬಳಸುವ ಔಷಧಿ

**ಹಿರುಡೋ ಮೆಡಿಸಿನಾಲಿಸ್:** ಇಂಬಳದ ವೈಜ್ಞಾನಿಕ ಹೆಸರು. ಈ ಹೆಸರನ್ನು ಕೊಟ್ಟವ ಕೆರೊಲಸ್ ಲಿನೇಯಸ್.

**ಧನ್ವಂತರಿ** : ದೇವತೆಗಳ ವೈದ್ಯ.

**ಅಂಕಣ** : ದೈನಿಕಗಳಲ್ಲಿ ಇಲ್ಲವೇ ಪಾಕ್ಷಿಕಗಳಲ್ಲಿ ನಿರ್ದಿಷ್ಟ ವಿಷಯಕ್ಕೆ ಗೊತ್ತುಪಡಿಸಿದ ಜಾಗದಲ್ಲಿ ನಿಯತವಾಗಿ ಪ್ರಕಟಿಸುವ ಬರೆಹ. ಮುಖ್ಯವಾಗಿ ವಿಷಯದ ಖಚಿತ ವಿವರಗಳ ನಿರೂಪಣೆಗಳೊಂದಿಗೆ ಸಂಕ್ಷಿಪ್ತ ಬರೆಹವಾಗಿರುತ್ತದೆ.

**ಜರಡಿಹುಣ್ಣು** : ರಂಧ್ರಗಳಿಂದ ಕೂಡಿರುವ ಗಾಯದ ಒಂದು ಸ್ಥಿತಿ.

## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**



**ಅ. ಬಿಟ್ಟಿರುವ ಜಾಗವನ್ನು ಸೂಕ್ತ ಪದದಿಂದ ತುಂಬಿ**

೧. ಏನೇನೂಸಿಗದೇ ಇದ್ದರೆ ________ ಹೀರಿ ಬದುಕುವ ಇಂಬಳ ಸಹ ಇವೆ.

೨. ಇಂಬಳದ ವೈಜ್ಞಾನಿಕ ಹೆಸರು ಮತ್ತು ವರ್ಗೀಕರಿಸಿದ ಮಹಾಶಯ ________

೩. ಮೈಕ್ರೋಸರ್ಜರಿ ಎಂದರೆ ________

೪. ಲೀಚ್‌ಗಳನ್ನು ಸಾಕುವ ಹೊಸ ವ್ಯವಸಾಯ ________ ಖಂಡದಲ್ಲಿದೆ.

೫. ಅಭಿನವ ಧನ್ವಂತರಿ ________ ಆಗಿದ್ದಾನೆ.

**ಆ. ಹೊಂದಿಸಿ ಬರೆಯಿರಿ**

| | 'ಅ' ಪಟ್ಟಿ | 'ಆ' ಪಟ್ಟಿ |
|---|---|---|
| ೧. | ಸುಶ್ರುತ | ಅಮೆರಿಕ |
| ೨. | ಎಫ್.ಡಿ.ಎ | ಗ್ರೀಸ್ |
| ೩. | ವರ್ಡ್ಸ್‌ವರ್ತ್ | ಭಾರತ |
| ೪. | ಅವಿಸೆನ್ನ | ಇಂಗ್ಲೆಂಡ್ |
| ೫. | ಹಿಪ್ಪೋಕ್ರೇಟ್ಸ್ | ಯುನಾನಿ |
| | | ಆಫ್ರಿಕಾ |
| | | ಯುರೋಪ್ |

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯ ಗ್ರಹಿಕಾ ಪ್ರಶ್ನೆಗಳು**

**ಅ. ಕೊಟ್ಟಿರುವ ವಾಕ್ಯಗಳ ಸಂದರ್ಭೋಚಿತ ಸ್ವಾರಸ್ಯ–ವಿವರವನ್ನು ಬರೆಯಿರಿ**

೧. "ಜಲಜೀವಿಗೆ ಅದು ಸಾರ್ಥಕ ಹೆಸರು."

೨. "ಅಂತಹ ಸುವ್ಯವಸ್ಥೆಯ ಕಡಿತ ಅದು!"

**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಚಾರ್ಮಾಡಿ ಘಟ್ಟದ ಚಾರಣದಲ್ಲಿ ಲೇಖಕರಿಗಾದ ಅನುಭವವನ್ನು ವರ್ಣಿಸಿ.

೨. ಜಿಗಣೆ ಚಿಕಿತ್ಸೆಯನ್ನು ಅನಾರೋಗ್ಯದ ಯಾವ್ಯಾವ ಸಂದರ್ಭಗಳಲ್ಲಿ ಬಳಸಬಹುದು?

೩. ಬಂಗೂ ಯಾರು? ಅವನ ಚಿಕಿತ್ಸಾ ವಿಧಾನವನ್ನು ವಿವರಿಸಿ.

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಮೂರು/ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಮುದುಕನು ಜಿಗಣೆಗಳನ್ನು ಏಕೆ ಸಂಗ್ರಹಿಸುತ್ತಿದ್ದ?

೨. ಇಂಬಳದ ಜೀರ್ಣಾಂಗದ ವಿಶೇಷತೆ ಏನು?

೩. ಇಂಬಳ ಯಾವ್ಯಾವ ಪ್ರಾಣಿಗಳನ್ನು ಸತಾಯಿಸಿ ರಕ್ತ ಹೀರುತ್ತವೆ?

೪. ಡಾ. ಕವಿತಾ ಅವರು ತಿಳಿಸಿದಂತೆ ಜಿಗಣೆ ಮೂಲಕ ನೀಡುವ ಚಿಕಿತ್ಸೆಗಳು ಯಾವುವು?

೫. ಜಿಗಣೆ ಕಚ್ಚಿಬಿಟ್ಟ ಬಳಿಕ ರಕ್ತಸ್ರಾವ ಯಾಕೆ ನಿಲ್ಲುವುದಿಲ್ಲ?

**ಈ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ಮುದುಕ ಯಾರಿಗೆ ಎದುರಾದ?

೨. 'ಜಿಗಣೆ ಹಿಡುಕ' – ಇದರ ಆಂಗ್ಲ ರೂಪ ಯಾವುದು?

೩. ಜಿಗಣೆಗಳು ಶೀತರಕ್ತ ಪ್ರಾಣಿಗಳ ನೆತ್ತರನ್ನು ಯಾವಾಗ ಹೀರುತ್ತವೆ?

೪. 'ಲೀಚ್‌ಥೆರಪಿ' ಎಂದರೇನು?

೫. ಜಿಗಣೆಗೆ ಯಾವ ಪ್ರಾಣಿಯ ನೆತ್ತರು ಪಂಚಪ್ರಾಣ?

# ಭಾಷಾಭ್ಯಾಸ

- **ಸೈದ್ಧಾಂತಿಕ ಭಾಷಾಭ್ಯಾಸ**

## ಸಂಸ್ಕೃತ ವ್ಯಂಜನ ಸಂಧಿಗಳು :

### ಜಶ್ತ್ವಸಂಧಿ

ಸಂಸ್ಕೃತ ವ್ಯಾಕರಣದಲ್ಲಿ ವರ್ಗೀಯ ವ್ಯಂಜನದ ವರ್ಗ ತೃತೀಯಾಕ್ಷರಗಳಾದ **ಗ್ ಜ್ ಡ್ ದ್ ಬ್** ಅಕ್ಷರಗಳನ್ನು **ಜಶ್** ಎಂಬ ಸಂಜ್ಞೆಯಿಂದ ಕರೆಯಲಾಗಿದೆ. ಈ **ಜಶ್** ಅಕ್ಷರಗಳು ಆದೇಶವಾಗಿ ಬರುವ ಸಂಧಿಗಳೇ **ಜಶ್ತ್ವಸಂಧಿ**.

– ಷಣ್ಮುಖನಿಗೆ **ಷಡಾನನ** ಹೆಸರೂ ಇದೆ.

ಈ ವಾಕ್ಯದಲ್ಲಿರುವ **ಷಡಾನನ** ಪದರಚನೆಯನ್ನು ಗಮನಿಸಿ

ಷಟ್ + **ಆ**ನನ > ಷ**ಡಾ**ನನ

**ಟ್** + ಆ > **ಡ್** + ಆ

ಇಲ್ಲಿ ಪೂರ್ವಪದದ ಅಂತ್ಯದಲ್ಲಿರುವ **ಟ** ಕಾರಕ್ಕೆ (ವರ್ಗದ ಪ್ರಥಮಾಕ್ಷರಕ್ಕೆ) ಪರಪದದ ಆದಿಯಲ್ಲಿರುವ **ಆ** ಕಾರ ಪರವಾಗಿ ಸಂಧಿಯಾದಾಗ **ಡ** ಕಾರ (ಅದೇ ವರ್ಗದ ತೃತೀಯಾಕ್ಷರ ಅಂದರೆ **ಜಶ್** ಅಕ್ಷರಗಳಲ್ಲಿ ಒಂದು) ಆದೇಶವಾಗಿ ಬಂದಿದೆ.

**ಸೂತ್ರ : ಪೂರ್ವಪದದ ಕೊನೆಯಲ್ಲಿರುವ ವರ್ಗ ಪ್ರಥಮಾಕ್ಷರಕ್ಕೆ ಅಂದರೆ ಕ್ ಚ್ ಟ್ ತ್ ಪ್ ಗಳಿಗೆ ಅದೇ ವರ್ಗದ ತೃತೀಯಾಕ್ಷರಗಳು ಅಂದರೆ ಗ್ ಜ್ ಡ್ ದ್ ಬ್ ಗಳು ಅಂದರೆ ಜಶ್ ಅಕ್ಷರಗಳು ಆದೇಶವಾಗಿ ಬಂದರೆ ಅದೇ ಜಶ್ತ್ವ ಸಂಧಿ.**

**ಉ.ದಾ.: ವಾಗ್ದೇವಿ ಅಜಂತ ಷಡಂಗ ಚಿದಾನಂದ ಅಬ್ಧಿ ಇತ್ಯಾದಿ**

### ಶ್ಚುತ್ವಸಂಧಿ

**ಶ್ ಚ್ ಛ್ ಜ್ ಝ್ ಞ್** – ಈ ಆರು ಅಕ್ಷರಗಳನ್ನು **ಶ್ಚು** ಎಂಬ ಸಂಜ್ಞೆಯಿಂದ ಕರೆಯಲಾಗಿದೆ. **ಶ್ಚು** ಅಕ್ಷರಗಳು ಆದೇಶವಾಗಿ ಬರುವ ಸಂಧಿಗಳೇ **ಶ್ಚುತ್ವ ಸಂಧಿ**.

**– ಮಾನವನಿಗೆ ಮನಶ್ಶುದ್ಧಿ ಇರಬೇಕು**

ಈ ವಾಕ್ಯದಲ್ಲಿರುವ **ಮನಶ್ಶುದ್ಧಿ** ಪದವನ್ನು ಗಮನಿಸಿ

**ಮನಸ್** + ಶುದ್ಧಿ > **ಮನಶ್ಶುದ್ಧಿ**

**ಸ್** + ಶ್ + **ಉ** > **ಶ್** + ಶ್ + **ಉ**

ಇಲ್ಲಿ ಪೂರ್ವಪದದ ಅಂತ್ಯದಲ್ಲಿರುವ **ಸ** ಕಾರಕ್ಕೆ ಪರಪದದ ಆದಿಯಲ್ಲಿರುವ **ಶ** ಕಾರ ಪರವಾಗಿ ಸಂಧಿಯಾದಾಗ ಪೂರ್ವಪದದ ಅಂತ್ಯದ **ಸ** ಕಾರಕ್ಕೆ **ಶ** ಕಾರ ಆದೇಶವಾಗಿ ಬಂದಿರುವುದು.

**ಸೂತ್ರ: ಸ ಕಾರ ತ ವರ್ಗಗಳಿಗೆ ಶ ಕಾರ ಚ ವರ್ಗಗಳು ಅಂದರೆ ಶ್ಚು ಅಕ್ಷರಗಳು ಆದೇಶವಾಗಿ ಬಂದರೆ ಅಂತಹ ಸಂಧಿಗಳೇ ಶ್ಚುತ್ವಸಂಧಿ.**

**ಉ.ದಾ.: ಪಯಶ್ಶಯನ ಶರಚ್ಚಂದ್ರ ಜಗಜ್ಜ್ಯೋತಿ ಇತ್ಯಾದಿ**

(ಸಮಾಸ ಮುಂದುವರಿದುದು)

## ಬಹುವ್ರೀಹಿಸಮಾಸ

**– ಮೂರು ಕಣ್ಣು ಉಳ್ಳವನು = ಮುಕ್ಕಣ್ಣ = ಶಿವ**
**– ಹಣೆಯಲ್ಲಿ ಕಣ್ಣುಳ್ಳವನು = ಹಣೆಗಣ್ಣ = ಶಿವ**

ಈ ಪದಗಳಲ್ಲಿ ಪೂರ್ವಪದದ ಅರ್ಥವಾಗಲೀ ಪರಪದದ ಅರ್ಥವಾಗಲೀ ಪ್ರಧಾನವಾಗಿಲ್ಲದೇ ಬೇರೊಂದು ಪದವಾದ **ಶಿವ** ಪದದ ಅರ್ಥವೇ ಪ್ರಧಾನವಾಗಿದೆ.

**ಸೂತ್ರ : ಎರಡು ಅಥವಾ ಅನೇಕ ಪದಗಳು ಸೇರಿ ಸಮಾಸವಾದಾಗ ಬೇರೊಂದು (ಅನ್ಯಪದ) ಪದದ ಅರ್ಥವು ಪ್ರಧಾನವಾಗಿರುವ ಸಮಾಸವೇ ಬಹುವ್ರೀಹಿಸಮಾಸ.**

ಉ.ದಾ.: **ನಾಲ್ಕು ಮೊಗ ಉಳ್ಳವನು ಆವನೋ ಅವನು = ನಾಲ್ಮೊಗ = ಬ್ರಹ್ಮ**
**ಚಕ್ರವು ಪಾಣಿಯಲ್ಲಿ ಉಳ್ಳವನು ಆವನೋ ಅವನು = ಚಕ್ರಪಾಣಿ = ವಿಷ್ಣು**
**ಫಾಲದಲ್ಲಿ ನೇತ್ರ ಉಳ್ಳವನು ಆವನೋ ಅವನು = ಫಾಲನೇತ್ರ = ಶಿವ**

## ಭಾಷಾ ಚಟುವಟಿಕೆ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ**

೧. ಜಶ್ತ್ವಸಂಧಿಯ ಸೂತ್ರವೇನು?

೨. ಶ್ಚುತ್ವಸಂಧಿಯನ್ನು ನಿದರ್ಶನದೊಂದಿಗೆ ವಿವರಿಸಿ.

೩. ಕೊಟ್ಟಿರುವ ಪದಗಳ ಸಮಾಸ ಹೆಸರಿಸಿ.
ಮುಕ್ಕಣ್ಣ ಹಣೆಗಣ್ಣ

೪. ಕೊಟ್ಟಿರುವ ಪದಗಳ ಸಂಧಿ ಹೆಸರಿಸಿ.
ವಾಗ್ದೇವಿ ಚಿದಾನಂದ

## ಪೂರಕ ಓದು

- **ಬಿ.ಜಿ.ಎಲ್. ಸ್ವಾಮಿ** ಅವರ **ಹಸುರು ಹೊನ್ನು** ಪುಸ್ತಕವನ್ನು ಓದಿ.
- **ಅಜ್ಜಂಪುರ ಕೃಷ್ಣಸ್ವಾಮಿ** ಅವರ **ಖಗಸಿರಿ ವನಸಿರಿ** ಹೊತ್ತಿಗೆ ಓದಿ.



## ಗದ್ಯಪಾಠ – ೦೯

# ಜನಪದ ಕಲೆಗಳ ವೈಭವ

### [ಜಾನಪದ]

– ಸಂಗ್ರಹ

**ಮುನ್ನುಡಿಯಾರಿ**

ಜನಪದ–ಕಲೆಗಳು ಮನುಷ್ಯನಷ್ಟೇ ಪ್ರಾಚೀನವಾದುವು. ಪರಿಸರ ವೀಕ್ಷಣೆ ಮತ್ತು ಅನುಕರಣೆಯಿಂದ ಅರಿತಿದ್ದನ್ನು ರೂಪಿಸಿಕೊಂಡಿರುವುದು, ಮಾನವನ ಸಹಜ ಗುಣದಿಂದ. ಹಾಗಾಗಿ ಇಂಥ ಕಲೆಗಳು ಅಸ್ತಿತ್ವಕ್ಕೆ ಬಂದವು. ಕಲೆ ಮನಸ್ಸಿಗೆ ನೆಮ್ಮದಿ, ಸಂತೋಷ ನೀಡುವುದಲ್ಲದೆ ಮುಂದಿನ ಪೀಳಿಗೆಗೆ ಆಕರವಾಗುತ್ತವೆ. ಜನಪದ ಸಂಸ್ಕೃತಿಯ ಪ್ರತಿ ಹೆಜ್ಜೆಯಲ್ಲೂ ಜನಪದ–ಕಲೆಗಳನ್ನು ಕಾಣಬಹುದು. ಜನಪದರ ಬದುಕೇ ಒಂದು ಕಲೆ. ಮುಗ್ಧ ಜನರಿಗೆ ತಿಳಿದೋ, ತಿಳಿಯದೆಯೋ ಅವರ ಬದುಕಿನಲ್ಲಿ ಕಲೆ ಹಾಸುಹೊಕ್ಕಾಗಿದೆ. ಜನಪದ ಕಲೆಗಳಿಗೂ ಜೀವನಕ್ಕೂ ನಿಕಟ ಸಂಬಂಧವಿದೆ. ನಿತ್ಯ ದುಡಿಮೆಯ ಆಯಾಸ, ಬದುಕಿನ ಏಕತಾನತೆ, ಆಸರಿಕೆ–ಬೇಸರಿಕೆಯನ್ನು ನಿವಾರಿಸಿಕೊಳ್ಳಲು ಮನುಷ್ಯ–ಕಲೆಗಳ ಮೊರೆ ಹೋಗಿದ್ದಾನೆ. ಇವನ್ನು ಜತನವಾಗಿ ರಕ್ಷಿಸಿ ಬೆಳೆಸಿಕೊಂಡು ಬಂದಿದ್ದಾನೆ. ಪ್ರಾರಂಭದಲ್ಲಿ ಆಂಗಿಕ ಸಂಜ್ಞೆಗಳಿಂದ ಕೂಡಿದ ಕಲೆಗಳು ಕ್ರಮೇಣ ಚಿತ್ರ, ಶಿಲ್ಪ, ಹಾಡು, ಕುಣಿತ ಮೊದಲಾದ ಆಯಾಮಗಳನ್ನು ಪಡೆದುಕೊಂಡಿವೆ. ಜನಪದ ನೃತ್ಯಗಳು ಕರ್ನಾಟಕದಾದ್ಯಂತ ಪ್ರಚಲಿತವಿದ್ದು ನಲವತ್ತಕ್ಕೂ ಹೆಚ್ಚು ಪ್ರಕಾರಗಳು ರೂಢಿಯಲ್ಲಿವೆ. ಕೆಲವು ಪ್ರಾದೇಶಿಕವಾಗಿ ಪ್ರಚಲಿತವಿದ್ದು ಜನಪ್ರಿಯತೆ ಪಡೆದಿವೆ.



**ಅರ್ಥೈಸಿ – ಓದಿ**

ವೀರಭದ್ರ ವಂಶಪಾರಂಪರ್ಯ ಗೃಹಪ್ರವೇಶ ರೋಮಾಂಚನ ಭೋರ್ಗರೆತ
ಕಾಂಸತಾಲ್ಯ ಸಾಂಪ್ರದಾಯಿಕ ಅತ್ಯಪೂರ್ವ ಆಕರ್ಷಕ ಬ್ರಹ್ಮಪಲ್ಲಕ್ಕಿ
ಕಸರತ್ತು ರಂಗಸ್ಥಳ ಚಕ್ರಮಂಡಿ ಕಲಾತ್ಮಕ ಲೋಕೋಕ್ತಿ

## ನಿಗದಿತ ಮೂಲ ಜಾನಪದ ಲೇಖನ ಗುಚ್ಛ

### ವೀರಗಾಸೆ

ವೀರಗಾಸೆ ಶೈವ ಸಂಪ್ರದಾಯದ ಧಾರ್ಮಿಕ ವೀರನೃತ್ಯ. ಸಾಮೂಹಿಕ ನೃತ್ಯವನ್ನೊಳಗೊಂಡ ಕರ್ನಾಟಕದ ಜನಪದ ಕಲೆ. ಇಬ್ಬರಿಂದ ಮೂವತ್ತು ಮಂದಿ ಇದರಲ್ಲಿ ಭಾಗವಹಿಸುತ್ತಾರೆ. ಪಂಚವಾದ್ಯಗಳಾದ ತಾಳ, ಶ್ರುತಿ, ಚಮಾಳ, ಓಲಗ, ಕರಡೆ ಬಳಕೆಯಾಗುತ್ತವೆ. ಕರಡೆಯು ಕುಣಿತದಲ್ಲಿ ಅನಿವಾರ್ಯ ವಾದ್ಯ ಎನಿಸಿದೆ.

ವೀರಗಾಸೆ ಕುಣಿತದವರ ವೇಷಭೂಷಣ ವಿಶೇಷವಾಗಿರುತ್ತದೆ. ಬಿಳಿಯ ಪಂಚೆಯ ವೀರಗಚ್ಚೆ, ತಲೆಗೆ ಅರಿಶಿಣ ಅಥವಾ ನೀಲಿ ಬಣ್ಣದ ರುಮಾಲು, ಕಾವಿ ಬಣ್ಣದ ಕಸೆಯಂಗಿ, ಕೊರಳಲ್ಲಿ ರುದ್ರಾಕ್ಷಿ ಸರ, ಹಣೆಗೆ ವಿಭೂತಿ, ಕರ್ಣಕುಂಡಲ, ಸೊಂಟಪಟ್ಟಿ, ಬಿಚ್ಚುಗತ್ತಿ, ಕಾಲ್ಗೆಜ್ಜೆ ಧರಿಸುತ್ತಾರೆ.



"ಅಹಹ ರುದ್ರಾ ಅಹಹಾ ದೇವಾ" ಎಂದು ವೀರಗಾಸೆಯ ನರ್ತಕ ಹೇಳುವ ಒಡಪಿನೊಂದಿಗೆ ಕುಣಿತ ಪ್ರಾರಂಭವಾಗುತ್ತದೆ. ಈ ಕುಣಿತದಲ್ಲಿ ವೀರಭದ್ರ ಹುಟ್ಟಿದ ಸಂದರ್ಭದ ವರ್ಣನೆ ಹೀಗಿದೆ. "ವೀರಭದ್ರದೇವರು ಹುಟ್ಟಿದ ರೂಪ ಎಂತು ಎಂದೊಡೆ ಹುಟ್ಟಿದಾಗಲೆ ಹೂವಿನಗಾಸೆ, ಮಂಜುಳಗಾಸೆ, ಬ್ರಹ್ಮಗಾಸೆ, ವಿಷ್ಣುಗಾಸೆ, ರುದ್ರಗಾಸೆ, ಮೆಟ್ಟಿದ ಹೊನ್ನಾವಿಗೆ, ಸಾವಿರ ಶಿರ, ಮೂರುಸಾವಿರ ನಯನ, ಎರಡುಸಾವಿರ ಭುಜ, ಕೆಕ್ಕರಿಸಿದ ಕಣ್ಣು, ಜುಂಜುಮಂಡೆ ಇಂತಪ್ಪ ಶ್ರೀ ವೀರಭದ್ರದೇವರು ಹೋಮದ ಕುಂಡದ ಒಳಗೆ ಹೇಗೆ ಬರುತ್ತಾರೆಂದರೆ . . . . . ."

ಚಮಾಳ ಹಾಗೂ ಕರಡೆಯ ಬಡಿತ ಇವರ ಕುಣಿತಕ್ಕೆ ಸ್ಫೂರ್ತಿ ನೀಡುತ್ತವೆ. ನಾಲ್ಕೈದು ಗತಿಗಳಿರುವ ವೀರಗಾಸೆಯ ಕುಣಿತದಲ್ಲಿ ಒಂದೊಂದು ಗತಿಯ ಕುಣಿತದ ಅನಂತರ ಮತ್ತೊಬ್ಬ ನರ್ತಕ ಒಡಪು ಹೇಳುತ್ತಾನೆ. ಒಡಪು ಮುಗಿಯುತ್ತಿದ್ದಂತೆ ವಾದ್ಯಗಳ ಭೋರ್ಗರೆತದೊಂದಿಗೆ ಮುಂದಿನ ಗತಿಯ ಕುಣಿತ ಪ್ರಾರಂಭವಾಗುತ್ತದೆ. ಗತಿಯಿಂದ ಗತಿಗೆ, ಕುಣಿತ, ಬಡಿತಗಳ ವೇಗ ಹೆಚ್ಚುತ್ತಾ ಹೋಗುತ್ತದೆ.

ವೀರಭದ್ರನ ಕುಣಿತ ಒಬ್ಬ ವ್ಯಕ್ತಿಯ ಕುಣಿತ. ವೀರಗಾಸೆ ಸಾಮೂಹಿಕ ನೃತ್ಯ. ವೀರಭದ್ರ ಕುಣಿತಕ್ಕೆ ದಕ್ಷಿಣಕರ್ನಾಟಕ ಪ್ರದೇಶದಲ್ಲಿ ಲಿಂಗಬೀರ, ಲಿಂಗಧೀರ, ಲಿಂಗವೀರ ಕುಣಿತವೆಂದು ಹೆಸರಿದೆ. ಉತ್ತರ ಕರ್ನಾಟಕದಲ್ಲಿ ಪುರವಂತರ ಕುಣಿತವೆಂದು ಜನಪ್ರಿಯವಾಗಿದೆ. ವೀರಶೈವ ಸಂಪ್ರದಾಯದವರು ವಂಶಪಾರಂಪರ್ಯವಾಗಿ ಈ ವೃತ್ತಿಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ವೀರಭದ್ರ ವೇಷಧಾರಿ ದಕ್ಷಯಾಗ, ವೀರಭದ್ರನ ಜನನ ಮತ್ತು ವೀರಭದ್ರನ ವಿಜಯ ಮುಂತಾದ ಒಡಪುಗಳನ್ನು ಹೇಳುತ್ತಾನೆ. ಇದಕ್ಕೆ 'ಖಡ್ಗ' ಎಂದು ಕರೆಯುತ್ತಾರೆ. ಉತ್ತರಕರ್ನಾಟಕದಲ್ಲಿ 'ಒಡಪು' ಎನ್ನುವರು. ಮತ್ತೊಬ್ಬ ವ್ಯಕ್ತಿ "ಭಲರೇ ವೀರ, ಅಹಹಾ ವೀರ" ಎಂದು ಕಾಕು ಹೇಳುತ್ತ ಜಾಗಟೆ ಬಡಿಯುತ್ತ ನಿಧಾನವಾಗಿ ವೀರಭದ್ರನ ಸುತ್ತ ತಿರುಗುತ್ತಾನೆ.

ಸಾಮಾನ್ಯವಾಗಿ ಮದುವೆ, ಗೃಹಪ್ರವೇಶ, ಜಾತ್ರೆ, ಉತ್ಸವ, ಹಬ್ಬ–ಹರಿದಿನಗಳಲ್ಲಿ ವೀರಭದ್ರನ ಕುಣಿತ ಏರ್ಪಡಿಸುತ್ತಾರೆ. ವೀರಗಾಸೆ ಸಾಮಾಜಿಕ ಸಂದರ್ಭಗಳಲ್ಲಿ ಮನರಂಜನೆಗಾಗಿಯೂ ಬಳಕೆಯಾಗುತ್ತಿದೆ. ಕುಣಿತ ನೋಡುವವರಿಗೆ ರೋಮಾಂಚನವನ್ನುಂಟು ಮಾಡುತ್ತದೆ.

## ಕಂಸಾಳೆ



**ಕೂಗೋ ಕೂಗೋ ಮಾದೇವನ**

**ಕೂಗಯ್ಯ ದುಂಡು ಮಾದೇವನ**

**ಕೂಗಿದರೆ ಕುಣಿಯುತ್ತ ಬರುವನು ಮಾದೇವ**

**ಕೂಗಯ್ಯ ಮುದ್ದು ಮಾದೇವನ**

ದಕ್ಷಿಣಕರ್ನಾಟಕದ ಜನ ದೀಪಾವಳಿ ಹಬ್ಬದ ಸಂದರ್ಭದಲ್ಲಿ ಮಹದೇಶ್ವರನ ಕಾವ್ಯವನ್ನು ಹೀಗೆ ಹಾಡುತ್ತ ಕಂಸಾಳೆಯೊಂದಿಗೆ ಕುಣಿಯುತ್ತ ಮಹದೇಶ್ವರನ ಬೆಟ್ಟಕ್ಕೆ ಹೋಗುವುದು ವಾಡಿಕೆ. ಕಂಸಾಳೆಯು ಮಲೆಯ ಮಹದೇಶ್ವರನ ಭಕ್ತರಾದ ದೇವರ ಗುಡ್ಡರು ಎಂಬ ಧಾರ್ಮಿಕ ವೃತ್ತಿಗಾಯಕರು ಬಳಸುವ ಕಂಚಿನ ತಾಳಗಳು. ಇದೊಂದು ಧಾರ್ಮಿಕ ಜನಪದವಾದ್ಯ. ಕಾಂಸತಾಲ್ಯ ಎಂಬ ಪದದ ತದ್ಭವ ರೂಪವೇ ಕಂಸಾಳೆ. ದೇವರ ಗುಡ್ಡರು ಇದನ್ನು ಬಿರುದು ಎಂದು ಕರೆಯುವರು. ಸಾಧಾರಣ ಬಟ್ಟು ತಾಳಗಳಿಗಿಂತ ಕಂಸಾಳೆ ಗಾತ್ರದಲ್ಲಿ ದೊಡ್ಡದು. ಆಕೃತಿಯಲ್ಲಿ ವಿಶಿಷ್ಟವಾದುದು. ಅಂಗೈ ಅಗಲದ ಚಕ್ರಾಕಾರದ ಬಟ್ಟಲು ಚಿಕ್ಕ ಜಾಗಟೆಯಂತಿರುವ ಮಟ್ಟಸವಾದ ಮೇಲುತಾಳ. ಮೇಲುತಾಳಕ್ಕೆ ಸೇರಿದಂತೆ ಹಿಡಿದುಕೊಳ್ಳಲು ಮಾಡಿಕೊಂಡ ಗೊಂಡೇವದ ಕಲಾತ್ಮಕ ಹುರಿ, ಇವು ಕಂಸಾಳೆಯ ಮುಖ್ಯ ಭಾಗಗಳು. ಬಟ್ಟಲನ್ನು ಮೇಲು ಮುಖವಾಗಿ ಎಡ ಅಂಗೈ ಮೇಲೆ ಇರಿಸಿಕೊಂಡು ಬಲಗೈಯಲ್ಲಿ ಹಿಡಿದ ಮೇಲುತಾಳವನ್ನು ಅದರ ಮೇಲೆ ಕುಟ್ಟುತ್ತಾರೆ. ಈ ನಾದದ ಹಿನ್ನೆಲೆಯಲ್ಲಿ ಗುಡ್ಡರು ಹಾಡುತ್ತಾರೆ. ವೃತ್ತಿಗಾಯಕರು ಬಳಸುವ ವಾದ್ಯಗಳಲ್ಲೆಲ್ಲ ಕಾಣಿಕೆ ಪಡೆಯುವ ಪಾತ್ರೆಯಾಗಿಯೂ ಬಳಕೆಯಾಗುವ ಏಕಮಾತ್ರ ಸಾಧನ ಕಂಸಾಳೆ. ಗುಡ್ಡರು ಕಾಣಿಕೆಯನ್ನು ಸ್ವೀಕರಿಸುವಾಗ ಕಂಸಾಳೆಯ ಬಟ್ಟಲನ್ನು ಮಾತ್ರ ಮುಂದೆ ಒಡ್ಡಿ ಪಡೆದು ಅನಂತರ ಜೋಳಿಗೆಗೆ ಸುರಿದುಕೊಳ್ಳುತ್ತಾರೆ. ಇದೊಂದು ಪವಿತ್ರ ಸಾಧನವಾದುದರಿಂದ ಅರ್ಪಿಸುವ ಕಾಣಿಕೆ ಮಲೆಯ ಮಹದೇಶ್ವರನಿಗೆ ಸಮರ್ಪಿತವಾದಂತೆಯೇ ಎಂಬ ಭಾವನೆ ಗುಡ್ಡನಿಗೂ ದಾನಿಗೂ ಇರುತ್ತದೆ. ಕಂಸಾಳೆಯ ಮಹಿಮೆ ಅಪಾರ ಎಂದು ಭಾವಿಸುವ ಗುಡ್ಡರು ಅದನ್ನು ಪೂಜಿಸುತ್ತಾರೆ. ಕೈಗೆತ್ತಿಕೊಳ್ಳುವ ಮೊದಲು "ಏಳ್ಮಲೆ ಹೆತ್ತಯ್ಯ ನಮ್ಮಪ್ಪಾಜಿ ಮಾಯ್ಕಾರ ಮಾದೇವ ನಿನ್ನ ಪಾದವೇ ಗತಿಕಣಪ್ಪ ಶರಣು ಶರಣಾರ್ಥಿ" ಎಂದು ನಮಸ್ಕರಿಸಿ ಕಣ್ಣಿಗೊತ್ತಿಕೊಂಡು ಅನಂತರ ಬಾರಿಸಲು ಪ್ರಾರಂಭಿಸುವರು.



ಭಜನೆ ಹಾಗೂ ಜಾತ್ರೆಗಳ ಸಂದರ್ಭದಲ್ಲಿ ಬಿಡಿ ಹಾಡುಗಳನ್ನು ಹೇಳಿಕೊಳ್ಳಲು ಮಾತ್ರವಲ್ಲದೆ ವಿಶೇಷ ಸಂದರ್ಭ ಹಾಗೂ ಹಬ್ಬ ಆಚರಣೆಗಳಲ್ಲಿ ಮೇಳವನ್ನು ನಡೆಸಲು ಹಾಗೂ ಬೀಸುಕಂಸಾಳೆ ನೃತ್ಯದಲ್ಲಿ ಹಾಡಲು, ಕುಣಿಯಲು ಕಂಸಾಳೆಯನ್ನು ಬಳಸುತ್ತಾರೆ. ಸಾಮಾನ್ಯವಾಗಿ ದೇವರ ಗುಡ್ಡರು ಸಾಂಪ್ರದಾಯಿಕವಾದ ವೇಷಭೂಷಣಗಳನ್ನು ಧರಿಸಿ, ಎತ್ತರವಾದ ರಂಗದಲ್ಲಿ ಕುಳಿತು ಕಥೆ ಮಾಡುತ್ತಾರೆ. ಇದನ್ನು ನಡೆಸಲು ಕೊನೇ ಪಕ್ಷ ಮೂವರು ಗುಡ್ಡರಾದರೂ ಇರಬೇಕು. ಮೇಳದಲ್ಲಿ ಏಕತಾರಿ, ದಮ್ಮಡಿಗಳನ್ನು ಹಿಮ್ಮೇಳದವರು ಬಳಸುತ್ತಾರೆ. ಮುಖ್ಯ ಗುಡ್ಡ, ಮುಮ್ಮೇಳಗಾರ ಕಂಸಾಳೆಯನ್ನು ಹಿಡಿಯುವರು. ಉಳಿದವರು ತಾಳದ ಗತ್ತಿಗೆ ತಕ್ಕಂತೆ ವಿವಿಧ ಮಟ್ಟುಗಳಲ್ಲಿ ಹಾಡುತ್ತಾರೆ. ಗತ್ತಿಗೆ ತಕ್ಕಂತೆ ತಾಳಕ್ಕೆ ಅನುಗುಣವಾಗಿಯೇ ಕಥೆಯನ್ನು

ಪದ್ಯರೂಪದಲ್ಲಿ ನಡುನಡುವೆ ವಿಶೇಷವಾಗಿ ವಚನದಲ್ಲಿ ನಿರೂಪಿಸಲಾಗುತ್ತದೆ. ಇದು ವಿಶಿಷ್ಟವಾದ ಪದ್ಯಗಂಧಿಯಾದ ಗದ್ಯ. ವಚನವನ್ನು ಪ್ರಧಾನ ಗಾಯಕ ನಿರೂಪಿಸುತ್ತಿರುವಾಗ ಅದರ ಪ್ರತಿ ಸಾಲಿನ ಅಂತ್ಯದಲ್ಲಿ ಸೊಲ್ಲಿನವರು "ಹೌದು, ಹೌದೌದು, ಶಿವಶಿವಾ, ಮಾದೇವ, ಹುಂ" ಮುಂತಾಗಿ ದನಿ ಕೊಡುತ್ತಿದ್ದು ಇದು ಕಥಾವಾಹಿನಿ ನಿರರ್ಗಳವಾಗಿ ಹರಿಯಲು ಪೋಷಕವಾಗಿರುತ್ತದೆ. ಒಂದೊಂದು ಪುಟ್ಟ ಪಾದದ ಅಂತ್ಯದಲ್ಲಿ ಕಂಸಾಳೆಯನ್ನು ಬಾರಿಸುತ್ತ ಕಥಾ ನಿರೂಪಣೆಗೆ ಚೈತನ್ಯವನ್ನು ತುಂಬಿಕೊಳ್ಳುವರು. ಹೆಜ್ಜೆ ಹೆಜ್ಜೆಗೂ ಕಂಸಾಳೆಯ ಮಿಡಿತ ಅದರ ಜತೆಯಲ್ಲಿ ಸಾಗುವ ವಿಸ್ತಾರ ಗದ್ಯಕಥನ ಆಕರ್ಷಕ ಹಾಗೂ ಮನಮೋಹಕ.

ದೇವರ ಗುಡ್ಡರು ಜನಪದ ಮಹಾಕಾವ್ಯಗಳಲ್ಲೊಂದಾದ ಮಲೆಯ ಮಹದೇಶ್ವರನ ಕಥೆಯನ್ನು ಪ್ರಧಾನವಾಗಿ ಹಾಡುತ್ತಾರೆ. ಇದಲ್ಲದೆ ಪಿರಿಯಾಪಟ್ಟಣದ ಕಾಳಗ, ಸಾರಂಗಧರ, ಬಿಳಿಗಿರಿ ರಂಗಸ್ವಾಮಿ, ಬೆಟ್ಟದ ಚಾಮುಂಡಿ, ಬಾಲನಾಗಮ್ಮ, ಮುಡುಕುತೊರೆ ಮಲ್ಲಪ್ಪ, ಕೋಳೂರ ಕೊಡಗೂಸು ಮೊದಲಾದ ಲೌಕಿಕ, ಧಾರ್ಮಿಕ ಹಾಗೂ ಐತಿಹಾಸಿಕ ಕಾವ್ಯಗಳನ್ನು ಹಾಡುತ್ತಾರೆ. ಮಂಟೇಸ್ವಾಮಿ ಕಾವ್ಯವನ್ನು ಅದರಲ್ಲೂ ಸಿದ್ದಪ್ಪಾಜಿಗೆ ಸಂಬಂಧಿಸಿದ ಭಾಗವನ್ನು ಕಂಸಾಳೆ ಗತ್ತಿಗೆ ಅಳವಡಿಸಿಕೊಂಡು ಹಾಡುತ್ತಾರೆ.

ಬೀಸುಕಂಸಾಳೆ ದೇವರಗುಡ್ಡರ ವಿಶಿಷ್ಟ ನೃತ್ಯ. ಕರ್ನಾಟಕದ ಜನಪದ ನೃತ್ಯಗಳಲ್ಲಿ ಅಪೂರ್ವವಾದುದು. ಇದರಲ್ಲಿ ತಾರ್‌ಬಟ್ಲು, ತಟ್‌ಬಟ್ಲು ಮುಂತಾದ ಬಗೆಗಳಿವೆ. ನಾಲ್ಕು ಮಂದಿ ಗುಡ್ಡರು ಒಂದು ಕಡೆ ನಿಂತು ಲಿಂಗ ಬಾ, ಮುದ್ದುಲಿಂಗ ಬಾ, ನಮ್ಮ ಮುದ್ದು ಮಾದಯ್ಯನ ಲಿಂಗ ಬಾ ಎಂದು ಹಾಡುತ್ತಾರೆ. ಕಂಸಾಳೆ ಹಿಡಿದ ಗುಡ್ಡ ತಾಳಕ್ಕೆ ತಕ್ಕಂತೆ ವಿವಿಧ ವಿನ್ಯಾಸದಲ್ಲಿ ಬಾರಿಸುತ್ತ ಕುಣಿಯುತ್ತಾನೆ. ತಲೆಯ ಮೇಲೆ, ಬೆನ್ನ ಹಿಂದೆ, ಕಾಲ ಕೆಳಗೆ, ಕುಳಿತು, ನಿಂತು, ಬಾಗಿ, ಬಳುಕಿ ತೀವ್ರಗತಿಯಲ್ಲಿ ನರ್ತಿಸುವ ಭಂಗಿ ಆಶ್ಚರ್ಯಕರ ಹಾಗೂ ಅದ್ಭುತ. ಒಮ್ಮೊಮ್ಮೆ ಇಬ್ಬರು ಗುಡ್ಡರು ಕಲೆತು ನರ್ತಿಸುವುದುಂಟು. ಒಬ್ಬರ ಕಂಸಾಳೆಗೆ ಮತ್ತೊಬ್ಬರು ಕುಟ್ಟುತ್ತಾ ಕುಣಿಯುವ ವೈಖರಿ ಆಕರ್ಷಕವಾಗಿರುತ್ತದೆ.



## ಡೊಳ್ಳುಕುಣಿತ



ಡೊಳ್ಳುಕುಣಿತ ಜನಪದ ಕಲೆಗಳಲ್ಲಿ ವಿಶಿಷ್ಟವಾದುದು. ಇದು ವಾದ್ಯ ಪ್ರಧಾನ ಕಲೆ. ಬೀರೇಶ್ವರ ಸಂಪ್ರದಾಯಕ್ಕೆ ಸೇರಿದ ಹಾಲುಮತ ಸಮುದಾಯದ ಕುಣಿತ. 'ಡೊಳ್ಳು' ಚರ್ಮವಾದ್ಯ. ಪೊಳ್ಳು ಪಡಗದ ಎರಡೂ ಬಾಯಿಗಳಿಗೆ ತೊಗಲು ಹೊದಿಸಿದ ಎರಡು ಪರಡೆಗಳನ್ನಿಟ್ಟು ಹಗ್ಗದಿಂದ ಬಿಗಿದಿರುತ್ತಾರೆ. ಇದನ್ನು ಎರಡೂ ಕೈಗಳಿಂದ ಬಾರಿಸಬಹುದು. ಬಲಗೈಯಲ್ಲಿ ಬಾರಿಸುವ 'ಗುಣಿ' ಇರುತ್ತದೆ. ಗುಣಿಯಿಂದ ಬಾರಿಸಿದ ಗತ್ತಿಗೆ ಹೊಂದಿಕೆಯಾಗುವಂತೆ ಎಡಗೈಯಿಂದ ಛಾಪು ಹಾಕಲಾಗುತ್ತದೆ. ಭರಮದೇವರ ಬ್ರಹ್ಮಪಲ್ಲಕ್ಕಿ ಉತ್ಸವ ಕಾಲಕ್ಕೆ ಡೊಳ್ಳು ಬಾರಿಸುತ್ತಾರೆ. ಸಾಮಾನ್ಯವಾಗಿ ಡೊಳ್ಳು ಬಾರಿಸುವವರು ದೇಹದ

ಮೇಲುಭಾಗಕ್ಕೆ ಕರಿಯ ಕಂಬಳಿಯನ್ನೂ ಸೊಂಟದ ಭಾಗಕ್ಕೆ ಮೊಳಕಾಲು ಮೇಲೆ ಬರುವಂತೆ ಕಚ್ಚೆಪಂಚೆಯನ್ನೂ ಉಡುತ್ತಾರೆ. ಕೆಲವೊಮ್ಮೆ ಹುಲಿಯ ಚರ್ಮದ ರೀತಿಯ ಉಡುಪನ್ನೂ ಧರಿಸುತ್ತಾರೆ.

ಕುಣಿತದ ಕಾಲಕ್ಕೆ ವಾದ್ಯಗಾರರು ಹಸಿರು ಇಲ್ಲವೇ ಕೆಂಪು ಬಣ್ಣದ ಗಗ್ಗರಿ, ಅಂಗಿ ಟೊಪ್ಪಿಗೆ ತೊಡುವರು. ಎರಡೂ ಕೈಗಳಲ್ಲೂ ಅದೇ ಬಣ್ಣದ ಕರವಸ್ತ್ರ ಹಿಡಿದಿರುತ್ತಾರೆ. ಕುಣಿತಕ್ಕೆ ಹಿನ್ನೆಲೆಯಾಗಿ ಡೊಳ್ಳು, ತಾಳ ಮತ್ತು ಕೊಳಲು ಇರುತ್ತವೆ. ಶ್ರಾವಣ ಸೋಮವಾರ, ಅಮಾವಾಸ್ಯೆಯ ದಿನ ಮತ್ತು ಯುಗಾದಿಯಂದು ಪಲ್ಲಕ್ಕಿ ಉತ್ಸವದ ತರುವಾಯ ಭರಮದೇವರ ಗುಡಿಯ ಮುಂದೆ ಡೊಳ್ಳಿನ ಹಾಡುಗಳ ಕಾರ್ಯಕ್ರಮ ನಡೆಯುತ್ತದೆ. ಅದರಂತೆ ಭಕ್ತರು ದೇವರ ಮುಮ್ಮೇಳದವರಾಗಿ ಒಬ್ಬರು ಡೊಳ್ಳು ಬಾರಿಸುತ್ತ ಹಾಡು ಹೇಳುತ್ತಾರೆ. ಹಿಮ್ಮೇಳದಲ್ಲಿ ಹಲವರು ತಾಳ ಮತ್ತು ಕೊಳಲು ಬಾರಿಸುತ್ತ ಮುಮ್ಮೇಳದವರು ಹೇಳಿಕೊಟ್ಟ ಹಾಡಿನ ಭಾಗವನ್ನು ಹೇಳುತ್ತಾರೆ. ಸಾಮಾನ್ಯವಾಗಿ ಹಾಡಿನ ವಿಷಯ ದೈವಮಹಿಮೆ ಅಥವಾ ದೈವಭಕ್ತರ ಕಥೆಯಾಗಿರುತ್ತದೆ. ಈ ಕಥನ ಕವನಕ್ಕೆ ರಗಳೆಯೇ ತಕ್ಕ ಧಾಟಿ. ಡೊಳ್ಳಿನ ಹಾಡು ಹೀಗೆ ಆರಂಭವಾಗುತ್ತದೆ:

**ಸ್ವಾಮಿ ನಮ್ಮಯ ದೇವರು ಬಂದಾನ ಬನ್ನಿರೇ**
**ಗುರುವೇ ನಮ್ಮಯ ದೇವರು ಬಂದಾನ ಬನ್ನಿರೇ**

ಬೀರೇಶ್ವರಹಾಡು ಬಹಳ ಹಿಂದಿನಿಂದಲೂ ಭಕ್ತರು ಮೌಖಿಕವಾಗಿ ಜತನವಾಗಿ ಕಾಯ್ದುಕೊಂಡು ಬಂದಿರುವ ಉತ್ತಮ ಕಾವ್ಯಗೀತೆ. ಡೊಳ್ಳಿನ ಹಾಡುಗಳು, ಬಾಳೇ ಮುಖ್ಯವೆಂದೂ ಅದಕ್ಕೆ ಬೀರದೇವರೇ ಬೆನ್ನಾಧಾರವೆಂದೂ ಸಾರಿ ಸಕಲ ಜನರಿಗೆ ಸುಖವಾಗಲೆಂದೂ ಸಂದೇಶ ನೀಡುತ್ತವೆ.



ಡೊಳ್ಳು ಕುಣಿತದಲ್ಲಿ ಹಲವಾರು ಕಸರತ್ತುಗಳೇ ಅಲ್ಲದೆ, ಕುದುರೆಕುಣಿತ, ಕೋಲುಕುಣಿತ, ಸಾರು ಕುಣಿತ, ಹುಚ್ಚೆಳ್ಳುಬಡಿತ, ಕೈಬಾರಿಕೆ, ಒಂದ್ಹೆಜ್ಜೆ, ಎರಡ್ಹೆಜ್ಜೆಕುಣಿತ, ಜೋಡುಸಾಲಿನ ಜಗ್ಗಿನ ಕೈಯಿ – ಮೊದಲಾದ ವೈವಿಧ್ಯಮಯ ಕುಣಿತಗಳಿವೆ. ಬೀರಪ್ಪನ ಡೊಳ್ಳು ಎಂದೇ ಬೆಳೆದು ಬಂದ ಈ ಅದ್ಭುತ ಪ್ರದರ್ಶನ ಕಲೆ ಇಂದು ಧಾರ್ಮಿಕತೆಯ ಆವರಣದಿಂದ ಹೊರಬಂದು ಲೌಕಿಕ ಉತ್ಸವಗಳಿಗೆ ತೆರೆದುಕೊಂಡಿದೆ.

## ಯಕ್ಷಗಾನ

ಯಕ್ಷಗಾನ ನೃತ್ಯಪ್ರಧಾನ ಕಲೆ. ಪ್ರಾರಂಭದಲ್ಲಿ ದೇಸೀ ಕಲೆಯಾಗಿದ್ದು ಅನಂತರ ಶಾಸ್ತ್ರದ ಚೌಕಟ್ಟಿಗೆ ಒಳಪಟ್ಟಿದೆ. ಇದು ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿಸುವ ಅಪೂರ್ವ ಶಕ್ತಿಯುಳ್ಳ ಕಲೆ. ಯಕ್ಷಗಾನದಲ್ಲಿ ಪ್ರಾದೇಶಿಕ ಪ್ರಭೇದಗಳಿವೆ. ಅದರಲ್ಲಿ ಮುಖ್ಯವಾದ ಮೂರು ಶೈಲಿಗಳು ತೆಂಕುತಿಟ್ಟು, ಬಡಗುತಿಟ್ಟು ಮತ್ತು ಬಡಬಡಗುತಿಟ್ಟು. ಯಕ್ಷಗಾನಕ್ಕೆ ದಶಾವತಾರ, ಬಯಲಾಟ, ಭಾಗವತರಾಟ ಎಂಬ ಹೆಸರೂ ಇವೆ. ಸಾಮಾನ್ಯವಾಗಿ ಬಯಲಾಟ ಪ್ರದರ್ಶಿತವಾಗುವುದು ಹಳ್ಳಿಯ ಬಯಲಿನಲ್ಲಿ. ಆದ್ದರಿಂದ ಅದು ಬಯಲಾಟ. ಯಕ್ಷಗಾನ ಕಲಿಸುವವನೇ ಭಾಗವತನಾದ್ದರಿಂದ ಭಾಗವತರಾಟ ಎಂಬ ಹೆಸರು ಬಂದಿದೆ. ಗೀತ, ಕುಣಿತ, ವೇಷಭೂಷಣ, ಮಾತುಗಾರಿಕೆ, ವಾದ್ಯ ಇವು ಬಯಲಾಟದ(ಮ್ಯಾಳ ಅಥವಾ ಅಟ್ಟದಾಟ) ಪಂಚ ಅಂಗಗಳು.



ಆಟ ಆಡಿಸುವ ಸ್ಥಳ ರಂಗಸ್ಥಳ. ಆರಂಭದ ಕಾಲದಲ್ಲಿ ಬಿದಿರು ಅಥವಾ ಕಂಬಗಳನ್ನು ಕಟ್ಟಿ ಮಾವಿನ ತೋರಣಗಳಿಂದ ಅಲಂಕರಿಸುತ್ತಿದ್ದರು. ಈಗ, ಸಿದ್ಧಪಡಿಸಿದರಂಗಸ್ಥಳದಲ್ಲಿ ಪ್ರದರ್ಶನ ನಡೆಸುವರು. ಹಿಮ್ಮೇಳದವರಿಗೆ ಆಸನ ವ್ಯವಸ್ಥೆ ಇರುತ್ತದೆ. ತೆಂಕುತಿಟ್ಟಿನ ಚಂಡೆ ವಾದಕನಿಗೆ ಆಸನ ವ್ಯವಸ್ಥೆಯಿರುವುದಿಲ್ಲ. ಪಾತ್ರಧಾರಿಗಳಿಗೆ ಒಂದು ಸಿಂಹಾಸನವಿರುತ್ತದೆ. ಬಡಗುತಿಟ್ಟಿನಲ್ಲಿ ಇದರ ಬದಲಿಗೆ ರಥದ ಆಕೃತಿಯ ಆಸನವನ್ನು ಸಾಂಪ್ರದಾಯಿಕವಾಗಿ ಬಳಸುತ್ತಿದ್ದರು. ಹಿಮ್ಮೇಳದ ಪ್ರಮುಖ ವಾದ್ಯ ಪರಿಕರಗಳೆಂದರೆ, ಚಂಡೆ, ಮದ್ದಳೆ, ಶ್ರುತಿ, ತಾಳ ಅಥವಾ ಜಾಗಟೆ. ಯಕ್ಷಗಾನದಲ್ಲಿ ಬಳಸುವ ವೇಷ ಭೂಷಣಗಳು ತಿಟ್ಟು ಮತ್ತು ಪಾತ್ರಕ್ಕನುಗುಣವಾಗಿ ವೈವಿಧ್ಯಮಯವಾಗಿರುತ್ತವೆ. ತೆಂಕಿನಲ್ಲಿ ಅರ್ಥಗಾರಿಕೆಗೆ ಪ್ರಾಧಾನ್ಯ ಇದ್ದು, ದೊಡ್ಡ ದೊಡ್ಡ ಹೆಜ್ಜೆ ಹಾಕಿ ಗಿರಕಿ ಹೊಡೆಯುವುದು ಇದರ ವೈಶಿಷ್ಟ್ಯ. ಬಡಗಿನಲ್ಲಿ ಕುಣಿತ ಹಾಗೂ ಅಭಿನಯಕ್ಕೆ ಪ್ರಾಧಾನ್ಯ ಇದ್ದು, ಚಕ್ರಮಂಡಿ ಕುಣಿತವಿರುತ್ತದೆ. ಹಾಡುಗಾರಿಕೆ ಹಾಗೂ ಕುಣಿತ ಯಕ್ಷಗಾನದ ಪ್ರಮುಖ ಅಂಗಗಳು. ಕುಣಿತಕ್ಕೆ ತಕ್ಕಂತೆ ಅಭಿನಯ, ಜಿಗಿತ, ಸಂಭಾಷಣೆ, ಹುಬ್ಬುಗಳ ಚಲನೆ ಪ್ರೇಕ್ಷಕರನ್ನು ತನ್ಮಯಗೊಳಿಸುತ್ತದೆ. ಇದರಲ್ಲಿ ನವರಸಗಳ ಅಭಿವ್ಯಕ್ತಿಗೆ ಅವಕಾಶವಿದೆ. ರಾಮಾಯಣ, ಮಹಾಭಾರತ ಮತ್ತು ಭಾಗವತದ ಪ್ರಸಂಗಗಳನ್ನು ಆಡಲಾಗುತ್ತದೆ. ಸಾಮಾನ್ಯವಾಗಿ ಕಾಳಗ, ಸಂಹಾರ ಮತ್ತು ಕಲ್ಯಾಣಗಳಿಗೆ ಸಂಬಂಧಪಟ್ಟ ಪ್ರಸಂಗಗಳೇ ಹೆಚ್ಚು. ಕಾಳಗವಿಲ್ಲದೆ ಯಕ್ಷಗಾನವಾಗಲೀ ಬಯಲಾಟವಾಗಲೀ ಇಲ್ಲ.



ರಂಗಸ್ಥಳ ಸಮೀಪವಿರುವ ನೇಪಥ್ಯವೇ ಚೌಕಿ ಅಥವಾ ಬಣ್ಣದ ಮನೆ. ಭಾಗವತರು ಹಿಮ್ಮೇಳ ಹಾಗೂ ಪಾತ್ರಧಾರಿಗಳೊಂದಿಗೆ ಇಲ್ಲಿಗೆ ಆಗಮಿಸುತ್ತಾರೆ. ಪಾತ್ರಧಾರಿಗಳು ತಮ್ಮ ಬಣ್ಣಗಳನ್ನು ತಾವೇ ಹಚ್ಚಿಕೊಳ್ಳುತ್ತಾರೆ. ಮೊದಲು ಚೌಕಿಯಲ್ಲಿ ಗಣಪತಿ ಪೂಜೆ ನಡೆಯುತ್ತದೆ. ತದನಂತರ ಕೋಡಂಗಿಗಳು ರಂಗ ಪ್ರವೇಶಿಸುವರು. ಗಣಪತಿ ಸ್ತುತಿಯ ಬಳಿಕ ವಿಷ್ಣು, ಪರಮೇಶ್ವರ, ದುರ್ಗೆ ಮೊದಲಾದ ದೇವತೆಗಳ ಸ್ತುತಿಯನ್ನು ಭಾಗವತರು ಮಾಡುತ್ತಾರೆ. ಹಾಡಿನ ಅನಂತರ ಭಾಗವತರಿಂದ ಸಭಾವಂದನೆ ಅನಂತರ ಕೋಡಂಗಿಗಳು ಕುಣಿದು ಕುಪ್ಪಳಿಸಿ ಪ್ರೇಕ್ಷಕರನ್ನು ರಂಜಿಸುತ್ತಾರೆ. ಅನಂತರ ಬಾಲಗೋಪಾಲರ ಆಗಮನ ಹಾಗೂ ಸ್ತ್ರೀ ವೇಷಗಳ ಕುಣಿತ. ಪುರುಷರೇ ಸ್ತ್ರೀ ವೇಷ ಹಾಕುವುದು ಯಕ್ಷಗಾನದ ವೈಶಿಷ್ಟ್ಯ. ಯಕ್ಷಗಾನದ ಪೂರ್ವರಂಗ ಎಂದು ಕರೆಯಲಾಗುವ ಬಾಲಗೋಪಾಲ, ಸ್ತ್ರೀ ವೇಷಗಳ ಉದ್ದೇಶ ಮುಂದಿನ ಕಥಾ

## ಚಟುವಟಿಕೆ

**ನಮೂದಿತ ಪದ್ಯಗಳನ್ನು ಕಂಠಪಾಠ ಮಾಡಿ**

ಕುಂಜರ ________ ____________

_________ ________ ________

_______ _______ ___________

_______ _______ ___________

_______ _____ ______ _______

_____ ______ ______ ನಂಬಿಕೊಳ್ಳಿರೊ॥

*　　　*　　　*

ಬೀಸುವ ______ _______

_______ ______

___________ ಬೆತ್ತವಾದೆ

ಆಡುವ ________ ________

_______ _________ ______

________ ಕೋಲಾದೆ

## ಪೂರಕ ಓದು

- **ಸುಳಾದಿಗಳನ್ನು ಸಂಗ್ರಹಿಸಿ ಓದಿ.**
- **ಎಸ್. ಜಿ. ನರಸಿಂಹಾಚಾರ್** ಅವರು ರಚಿಸಿದ **ಗೋವಿನ ಹಾಡು – ನೀನಾರಿಗಾದೆಯೋ ಎಲೆ ಮಾನವ** ಹಾಡನ್ನು ಸಂಗ್ರಹಿಸಿ **ಬಿದಿರು** ಪದ್ಯದೊಂದಿಗೆ ಹೋಲಿಸಿ ನೋಡಿ.



# ಕಾವ್ಯ ಸಂಗಮ

– ರಾಘವಾಂಕ, – ಸತ್ಯವಿಠಲ

**ಮುನ್ನುಡಿ / ಮುನ್ತಯಾರಿ**

ಉತ್ತಮ ಕಾವ್ಯಗಳ ಅಧ್ಯಯನದಿಂದ ಜ್ಞಾನ ಹೆಚ್ಚುವುದರೊಂದಿಗೆ ಮಾನಸಿಕ ನೆಮ್ಮದಿ, ಸುಖ, ಶಾಂತಿ ಲಭಿಸುತ್ತದೆ. ಅದರಿಂದ ಮಹೋನ್ನತ ಸಂಸ್ಕೃತಿಯ ಪರಿಚಯವಾಗಿ ಮನಸ್ಸು ಸಂಸ್ಕಾರಗೊಂಡು ಗೌರವಯುತ ಬದುಕನ್ನು ನಡೆಸಲು ಸಾಧ್ಯವಾಗುತ್ತದೆ. ನಾಡಿನ ಪ್ರಾಕೃತಿಕ ಸೊಬಗು, ಸಂಸ್ಕೃತಿಯ ತನ್ಮಯತೆ ಚಾರಿತ್ರಿಕ ಅಭಿಮಾನ ಇತ್ಯಾದಿ ಮೌಲಿಕಾಂಶಗಳ ಅರಿವು ಅಗತ್ಯ ಅಷ್ಟೇ ಅಲ್ಲದೆ ಅನಿವಾರ್ಯ ಕೂಡ. ಅದಕ್ಕೆಂದೇ ಕಾವ್ಯಶಾಸ್ತ್ರ ವಿನೋದೇನ ಕಾಲೋ ಗಚ್ಛತಿ ಧೀಮತಾಂ ಎಂದು ಹಿರಿಯರು ಹೇಳಿದ್ದು.

ಪುರಾಣಗಳಲ್ಲಿ ತ್ಯಾಗ, ಬಲಿದಾನವನ್ನು ಮಾಡಿದವರ ನೂರಾರು ಕಥೆಗಳಿವೆ. ಕನ್ನಡ ಸಾಹಿತ್ಯದಲ್ಲೂ ಇಂತಹ ಕಥೆಗಳು ಹೇರಳವಾಗಿವೆ. "ಸತ್ಯವೇ ನಮ್ಮ ತಾಯಿ ತಂದೆ, ಸತ್ಯವೇ ನಮ್ಮ ಬಂಧು–ಬಳಗ" ಎಂದು ಹೇಳಿ ಅದರಂತೆ ನಡೆದ 'ಪುಣ್ಯಕೋಟಿ'ಯ ಕಥೆ ಜನಜನಿತವಾಗಿದೆ.

ನಡುಗನ್ನಡ ಕಾಲದ ಕವಿ ರಾಘವಾಂಕ ಸತ್ಯಪಾಲನೆಗಾಗಿ ಸಮಸ್ತವನ್ನೂ ತ್ಯಜಿಸಿದ 'ಹರಿಶ್ಚಂದ್ರ'ನ ಭವ್ಯ ಕಥೆಯನ್ನಾಧರಿಸಿ ರೋಚಕ ಕಾವ್ಯ ರಚಿಸಿ ಧನ್ಯನಾಗಿದ್ದಾನೆ. ಸತ್ಯಕ್ಕೆ ಜಯ ಎಂಬುದನ್ನು ಸಾಕಾರಗೊಳಿಸಿದ ರಾಜಾ ಹರಿಶ್ಚಂದ್ರನಿಗೆ ಅಂತಃಸ್ಫೂರ್ತಿಯಾದವಳು ಚಂದ್ರಮತಿ. ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಒಂದು ಮನೋಜ್ಞ ಸಂದರ್ಭವನ್ನು ಇಲ್ಲಿ ಆರಿಸಿಕೊಳ್ಳಲಾಗಿದೆ. ವಿದ್ಯಾರ್ಥಿಗಳು ಇಂತಹ ಜೀವನ ಮೌಲ್ಯಗಳನ್ನು ಗಳಿಸಿಕೊಳ್ಳಬೇಕೆಂಬುದೇ ಪದ್ಯಪಾಠದ ಆಶಯ.



**ಅರ್ಥೈಸಿ – ಓದಿ**

| | | | | |
|---|---|---|---|---|
| ಮಕರಧ್ವಜಂ | ವಿಪಿನ | ಭೂರಮಣ | ಮುಸುಡು | ರೋಮಾಳಿ |
| ಲುಬ್ಧಕಶರಮೂಡಿಗೆ | ದಿಗುಪಾಲ | ಗರಳಗೊರಳ | ತರಣಿ | ಡಗೆದೋಜೆ |
| ಅಳವಿ | ವಿಗಡ | ನಿರುತ | | |

* * * *

## ೧. ಹರಿಶ್ಚಂದ್ರಕಾವ್ಯ (ವಾರ್ಧಕ ಷಟ್ಪದಿ)

ಗುರುವಸಿಷ್ಠಂಗೆಜಿಗಿ ನೇಮವಂ ಪಡೆದಖಿಳ
ಗುರುವಿರೂಪಾಕ್ಷಲಿಂಗವನು ಬೀಳ್ಕೊಂಡು ಭಾ
ಸುರ ವರೂಥವನೇಜಿ ಭೂಪಾಲ ಮಕರಧ್ವಜಂ ನಡೆಯೆ ತಡೆವೇಂಟೆಗೆ ।
ಪರಿಕರದ ಪರಿವಾರವನುವಾಗಿ ವಿಪಿನದೊಳು
ಹರೆದು ನಡೆಯಲ್ಕತ್ತಲಿತ್ತ ಕೌಶಿಕಮುನೀ
ಶ್ವರನೊಂದು ಮಾಯಾವರಾಹನಂ ಮಾಡಿ ಕಳುಹಿದನು ಭೂರಮಣನೆಡೆಗೆ ॥ ೧ ॥

ಮಸೆವ ದಾಡೆಯ ಕುಡಿಗಳಿಂದ ಕಿಡಿ ಸುರಿಯೆ ಘೂ
ರ್ಮಿಸುವ ಮೂಗಿಂದ ಕರ್ಬೊಗೆ ನೆಗೆಯೆ ಮುನಿದು ನಿ
ಟ್ಟಿಸುವ ಕೆಂಗಣ್ಣ ಕಡೆಯಿಂದ ದಳ್ಳುರಿ ಸೂಸೆ ಬಲಿದ ಕೊರಳೊಲೆದ ಮುಸುಡು ।
ಕುಸಿದ ತಲೆ ನೆಗೆದ ಬೆನ್ ನಟ್ಟ ರೋಮಾಳಿ ಮಿ
ಳ್ಳಿಸುವ ಬಾಲಂ ರೌದ್ರಕೋಪಮಮಂ ಬೀಱೆಗ
ರ್ಜಿಸಿ ಬೀದಿವರಿದು ತೊತ್ತಳದುಳಿದು ಕೊಂದು ಕೂಗಡಿಸಿತ್ತು ಲುಬ್ಧಕರನು ॥ ೨ ॥

ಇದ್ದ ಬೇಡರನೆಯ್ದೆ ಕೆಡಹಿದಡೆ ರಥದ ಮೇ
ಲಿದ್ದು ಕೋಪಾಟೋಪದಿಂದ ಕರತಳವ ಮಾ
ಱುದ್ದಿ ಕೋದಂಡಮಂ ಸೆಳೆದು ಶರಮೂಡಿಗೆಯ ಮಡಲಿಱೆದು ಕೈಹೊಡೆಯನು ।
ತಿದ್ದಿ ನಾರಿಯ ನೀವಿ ಮಿಡಿದು ಬಾಗಿದ ಕೊಪ್ಪಿ
ನಿದ್ದೆಸೆಯನಾರೈದು ನೆಱೆ ಮೃತ್ಯು ದೇವತೆಗೆ
ಬಿದ್ದನಿಕ್ಕುವೆನೆಂದು ಭೂವಲ್ಲಭಂ ನುಡಿಯೆ ದಿಗುಪಾಲರಳವಳಿದರು ॥ ೩ ॥

ಗರಳಗೊರಳವನರಳ ಸರಳಂಗೆ ಮುನಿವಂತೆ
ಯಿರುಳ ತಿರುಳಿನ ಹೊರಳಿಗಾ ತರಣಿ ಕೆರಳ್ವಂತೆ
ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು ।
ಹುರುಳಳಿದುದುರವೊಡೆದು ಸರಳುರ್ಚೆ ನರಳುತ್ತ
ತೊರಳೆಯಡಸಲು ಮೂಗನರಳಿಸೆಚ್ಚಂಬ ಹೊ
ತ್ತುರುಳ್ವ ಕಂಬನಿಯಿಂದ ತರಳ ಚಿತ್ತದ ಹಂದಿ ಮರಳಿ ಕಾನನಕೆಯ್ದಿತು ॥ ೪ ॥

ಬಳಿವಿಡಿದು ಬಳಿಚಿದಂಬಿಂ ಮುಂದೆ ಹರಿದು ವನ
ದೊಳಗಡಗಿ ಮಾಯವಾದೆಕ್ಕಲನನಲ್ಲಲ್ಲಿ
ಸುಳಿದಱಸಿ ಕಾಣದೆ ಮನಂ ನೊಂದು ಧೃತಿಯಡಗಿ ಡಗೆದೋಱೆಕಟ್ಟಾಸಱು ।
ಮೊಳೆತು ಬಾಯಾಱೆ ತನು ಬೆಮರಿ ಮುಖ ಬಾಡಿ ರವಿ
ಕುಲ ಶಿರೋಮಣಿ ಹರಿಶ್ಚಂದ್ರರಾಯಂ ಕಂಡ
ನಳವಿಯೊಳು ನಾನಾ ವಿಶೇಷ ವಿಭವಂಬಡೆದ ಮಂಗಳ ತಪೋವನವನು ॥ ೫ ॥

ಹೊಗಳುತ್ತ ಹಾರಯಿಸುತುಬ್ಬುತ್ತ ಕೊಬ್ಬುತ್ತ
ನಗುತ ನಲಿಯುತ್ತ ಹಾಡುತ್ತಾಡುತಾನಂದ
ವೊಗೆಯುತಿರಲೊಬ್ಬ ಮುನಿಯಂ ಕಂಡಿದಾವನಾಶ್ರಮವೆಂದು ಬೆಸಗೊಂಡಡೆ ।
ವಿಗಡ ವಿಶ್ವಾಮಿತ್ರ ಮುನಿಯ ಬನವೆನೆ ಸುಖಂ
ಸುಗಿದು ಪೊಯ್ವಡೆದಂತೆ ಹಾವಗಿದು ಬಿಟ್ಟಂತೆ
ಬಗೆ ಬೆದಱೆ ಗುರುವಾಜ್ಞೆಗೆಟ್ಟುದಿನ್ನೇಗೆಯ್ವೆನೆಂದನು ಹರಿಶ್ಚಂದ್ರನು ॥ ೬ ॥

ಸತಿ ಮಡಿಸಿ ನೀಡುವೆಲೆವಿಡಿದ ಕೈ ಬಸವಳಿದು
ದತಿ ಚಿಂತೆಯೊಳು ಮಱೆದ ತನು ಜೊಮ್ಮುವಿಡಿದ ಪು
ರ್ಬತಿ ಭಾರವಾಗಿ ಕಣ್ಮುಚ್ಚಿ ತೋಳ್ ತೊಡೆ ಮಿಡುಕೆ ಸುಯ್ ಸೂಸೆ ನಿದ್ರೆ ಕವಿದು ।
ವಿತತ ಸುಖದಿಂದಿರುತಿರಲ್ಕೆ ನಾನಾ ದುಃಖ
ಯುತವಪ್ಪುದೊಂದು ಕನಸಂ ಕಂಡು ನೊಂದು ಭೂ
ಪತಿ ಬೆದಱೆದಂತೆ ಭೋಂಕೆನಲೆದ್ದು ಬೆಬ್ಬಳಿಸಿ ನಾಲ್ದೆಸೆಯನಾರಯ್ದನು ॥ ೭ ॥

ಧುರದೊಳರಿ ಭೂಭುಜರನಂಜಿಸುವ ನಡುಗಿಸುವ
ಕೊರಗಿಸುವ ಕೋಡಿಸುವ ಬಳುಕಿಸುವ ಜಳುಕಿಸುವ
ಬಿರುದಂಕಮಲ್ಲ ನೀ ನಡುಗಲೇತಕ್ಕೆ ಹೇಳೆಂದು ಮೆಲ್ಲನೆ ನುಡಿಸಲು ।
ತರುಣಿ ಕೇಳೊಂದು ಕನಸಂ ಕಂಡೆನಾ ಕನಸು
ನಿರುತವೆಂದೇ ಕಣ್ಣ ತೆಱೆದೆ ನೀನಿಂತದಱ
ಪರಿಯಂ ವಿಚಾರಿಸೆಂದವನೀಶ ನುಡಿಯಲಾ ನುಡಿಗೆ ಸತಿ ಹೂಂಕೊಂಡಳು ॥ ೮ ॥

ಘುಡಿ ಘುಡಿಸುತೊಬ್ಬಮುನಿ ಬಂದು ನಾನೋಲಗಂ
ಗೊಡುವ ಮಣಿಮಂಟಪದ ಕಂಭವೆಲ್ಲವನು ತಡೆ
ಗಡಿದು ಹೊಂಗಳಸಂಗಳಂ ಮಾಣದೊಡೆಬಡಿದು ನೆರೆದ ಸಭೆಯೊಳಗೆನ್ನನು ।
ಕೆಡಹಿ ಸಿಂಹಾಸನವ ನೊಯ್ವಾಗಳೆನ್ನೆದೆಯ
ನಡರ್ದೊಂದು ಕಾಗೆ ಕರೆದುದು ಬಳಿಕ್ಕಾಂ ಗಿರಿಯ
ನಡರ್ದು ಶಿಖರದೊಳೆಸೆವ ಮಣಿಗೃಹಂಬೊಕ್ಕೆನಿದಱಂತಸ್ಥವೇನೆಂದನು ॥ ೯ ॥

ಬಗೆವಡೀ ಕನಸು ಗುರುವಾಜ್ಞೆಯಂ ಮೀಱೆತ
ಕ್ಕೊಗೆವ ಕೇಡಿಂಗೆ ಸೂಚನೆ ಮುನಿಯಬೇಡ ಮಂ
ತ್ರಿಗೆ ಮಗಂಗೆನಗೆ ರಾಜ್ಯಕ್ಕೆ ಚತುರಂಗ ಸೇನೆಗೆ ಸಕಲ ಭಂಡಾರಕೆ ।
ನಗರಕ್ಕೆ ಸರ್ವ ಪರಿವಾರಕ್ಕೆ ತೇಜದೇ
ಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ
ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡಿದೆನೆಂದಳು ॥ ೧೦ ॥

– **ರಾಘವಾಂಕ**

## ೨. ಸಂಪೂರ್ಣದೇವೀ ಮಹಾತ್ಮೆ (ಭಾಮಿನಿ ಷಟ್ಪದಿ)

**ಅರ್ಥೈಸಿ – ಓದಿ**

| ಮಧುರ | ವರ್ಣಿಪ | ಆತ್ಮದರ್ಶಿತ | ವೀರಗಲ್ಲು |
|---|---|---|---|
| ವರಕೇಸರಿ | ಗರ್ಜನೆ | ವಚನ | ಸೌರಭ |

ಕನ್ನಡವು ಹಿರಿದೊಂದು ಸಂಸ್ಕೃತಿ
ಕನ್ನಡವು ಹಿರಿದೊಂದು ಜ್ಞಾನವು
ಕನ್ನಡದ ಕಸ್ತೂರಿ ಸೌರಭ ಲೋಕತುಂಬಿಹುದು ।
ಕನ್ನಡದ ನುಡಿಕಿವಿಗೆ ಮಧುರವು
ಕನ್ನಡದ ನುಡಿ ಮಧುರ ಜೇನುವು
ಕನ್ನಡದ ಸಿರಿ ಸೊಬಗ ವರ್ಣಿಪರಾರು ಲೋಕದಲಿ ॥ ೧ ॥

ಅಲ್ಲಿಗಲ್ಲಿಗೆ ಕಮಲ ಕೊಳಗಳು
ಅಲ್ಲಿಗಲ್ಲಿಗೆ ಹರಿವ ತೊರೆಗಳು
ಅಲ್ಲಿಗಲ್ಲಿಗೆ ಮೆರೆವ ಸುಂದರ ಭವ್ಯ ಕಲ್ಯಾಣಿ ।
ಅಲ್ಲಿಗಲ್ಲಿಗೆ ಮೆರೆವ ತಪವನ
ಅಲ್ಲಿಗಲ್ಲಿಗೆ ಪುಣ್ಯ ನದಿಗಳು
ಅಲ್ಲಿಗಲ್ಲಿಗೆ ಆತ್ಮದರ್ಶಿತ ದಿವ್ಯ ಗುರುವರರು ॥ ೨ ॥

ಎಲ್ಲಿ ನೋಡಲಿ ವೀರಗಲ್ಲುಗ
ಳೆಲ್ಲಿ ನೋಡಲಿ ರಕ್ತಕೊಡುಗೆಗ
ಳೆಲ್ಲಿ ನೋಡಲಿ ಸತ್ಯಪಥಿಗಳ ದಾನ ಶಾಸನವು ।
ಎಲ್ಲಿ ನೋಡಲಿ ಭವ್ಯ ಶಿಲ್ಪಗ
ಳೆಲ್ಲಿ ನೋಡಲಿ ಕಲೆಯ ಬಲೆಗಳು
ಎಲ್ಲಿ ನೋಡಲಿ ಜಗವೆ ಬೆಚ್ಚುವ ಭವ್ಯ ವಾಸ್ತುಗಳು ॥ ೩ ॥

ಹರಿವ ನದಿ ಭೋರ್ಗರೆತ ಕನ್ನಡ
ಸರಸ ಪಕ್ಷಿಗಳುಲಿಯು ಕನ್ನಡ
ಗರುವಿಕೆಯ ವರಕೇಸರಿಯ ಗರ್ಜನೆಯು ಕನ್ನಡವು ।
ಶರಣ ತೋರಿದ ವಚನ ಕನ್ನಡ
ಮೆರೆದ ದಾಸರ ಹೃದಯ ಕನ್ನಡ
ಧೀರ ವೀರರ ಲೋಕಗುರುಗಳ ನೆಲವೆ ಕನ್ನಡವು ॥ ೪ ॥

–ಸತ್ಯವಿಠಲ

# ೧. ಪದ ವಿಂಗಡಣಾ ಓದು

**ಪದ್ಯ–೧.** ಗುರು ವಸಿಷ್ಠಂಗೆ + ಎಱ[ರ]ಗಿ ನೇಮವಂ ಪಡೆದು + ಅಖಿಳ ಗುರುವಿರೂಪಾಕ್ಷ ಲಿಂಗವನು ಬೀಳ್ಕೊಂಡು ಭಾಸುರ ವರೂಥವನು + ಏಱ[ರಿ] ಭೂಪಾಲ ಮಕರಧ್ವಜಂ ನಡೆಯೆ ತಡೆ + ಬೇಂಟೆಗೆ ಪರಿಕರದ ಪರಿವಾರ + ಅನುವಾಗಿ ವಿಪಿನದೊಳು ಹರೆದು ನಡೆಯಲ್ಕೆ + ಅತ್ತಲ್ + ಇತ್ತ ಕೌಶಿಕಮುನಿ + ಈಶ್ವರನ್ + ಒಂದು ಮಾಯಾವರಾಹನಂ ಮಾಡಿ ಕಳುಹಿದನು ಭೂರಮಣನ + ಎಡೆಗೆ

**ಪದ್ಯ–೨.** ಮಸೆವ ದಾಡೆಯ ಕುಡಿಗಳಿಂದ ಕಿಡಿ ಸುರಿಯೆ ಘೂರ್ಮಿಸುವ ಮೂಗಿಂದ ಕರ್ + ಪೊಗೆ ನೆಗೆಯೆ ಮುನಿದು ನಿಟ್ಟಿಸುವ ಕೆಂಗಣ್ಣ ಕಡೆಯಿಂದ ದಳ್ಳುರಿ ಸೂಸೆ ಬಲಿದ ಕೊರಳ್ + ಒಲೆದ ಮುಸುಡು ಕುಸಿದ ತಲೆ ನೆಗೆದ ಬೆನ್ ನಟ್ಟ ರೋಮ + ಆಳಿ ಮಿಳ್ಳಿಸುವ ಬಾಲಂ ರೌದ್ರಕೋಪಮಂ ಬೀಱ[ರೆ] ಗರ್ಜಿಸಿ ಬೀದಿ + ಪರಿದು ತೊತ್ತಳ + ತುಳಿದು ಕೊಂದು ಕೂಗ + ಅಡಿಸಿತ್ತು ಲುಬ್ಧಕರನು

**ಪದ್ಯ–೩.** ಇದ್ದ ಬೇಡರನು + ಎಯ್ದೆ ಕೆಡಹಿದಡೆ ರಥದ ಮೇಲ್ + ಇದ್ದು ಕೋಪ+ಆಟೋಪದಿಂದ ಕರತಳವ ಮಾಱು[ರು]ದ್ದಿ ಕೋದಂಡಮಂ ಸೆಳೆದು ಶರಮೂಡಿಗೆಯ ಮಡಲ್ + ಇಱ[ರಿ]ದು ಕೈ ಹೊಡೆಯನು ತಿದ್ದಿ ನಾರಿಯ ನೀವಿ ಮಿಡಿದು ಬಾಗಿದ ಕೊಪ್ಪಿನ + ಇದ್ದೆಸೆಯನು + ಆರೈದು ನೆಱ[ರೆ] ಮೃತ್ಯು ದೇವತೆಗೆ ಬಿದ್ದನು + ಇಕ್ಕುವೆನು + ಎಂದು ಭೂವಲ್ಲಭಂ ನುಡಿಯೆ ದಿಗುಪಾಲರು + ಅಳವಳಿದರು

**ಪದ್ಯ–೪.** ಗರಳ + ಕೊರಳವನು + ಅರಳ ಸರಳಂಗೆ ಮುನಿವಂತೆ + ಇರುಳ ತಿರುಳಿನ ಹೊರಳಿಗೆ + ತರಣಿ ಕೆರಳ್ವಂತೆ ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು ಹುರುಳು + ಅಳಿದುದು + ಉರ + ಒಡೆದು ಸರಳು + ಉರ್ಚೆ ನರಳುತ್ತ ತೊರಳೆ + ಅಡಸಲು ಮೂಗನು + ಅರಳಿಸಿ + ಎಚ್ಚ + ಅಂಬ ಹೊತ್ತು + ಉರುಳ್ವ ಕಂಬನಿಯಿಂದ ತರಳ ಚಿತ್ತದ ಹಂದಿ ಮರಳಿ ಕಾನನಕೆ + ಎಯ್ದಿದತು

**ಪದ್ಯ–೫.** ಬಳಿವಿಡಿದು ಬಳಿಚಿದ + ಅಂಬಿಂ ಮುಂದೆ ಹರಿದು ವನದ + ಒಳಗೆ + ಅಡಗಿ ಮಾಯ + ಆದ ಎಕ್ಕಲನನು + ಅಲ್ಲಿ + ಅಲ್ಲಿ ಸುಳಿದು + ಅಱ[ರ]ಸಿ ಕಾಣದೆ ಮನಂ ನೊಂದು ಧೃತಿ + ಅಡಗಿ ಡಗೆ + ತೋಱ[ರಿ] ಕಟ್ಟ+ಆಸಱು[ರು] ಮೊಳೆತು ಬಾಯಾಱ[ರಿ] ತನು ಬೆಮರಿ ಮುಖ ಬಾಡಿ ರವಿಕುಲ ಶಿರೋಮಣಿ ಹರಿಶ್ಚಂದ್ರರಾಯಂ ಕಂಡನ್ + ಅಳವಿಯೊಳು ನಾನಾ ವಿಶೇಷ ವಿಭವಂ + ಪಡೆದ ಮಂಗಳ ತಪೋವನವನು

ಪದ್ಯ–೬. ಹೊಗಳುತ್ತ ಹಾರಯಿಸುತ + ಉಬ್ಬುತ್ತ ಕೊಬ್ಬುತ್ತ ನಗುತ ನಲಿಯುತ್ತ ಹಾಡುತ್ತ + ಆಡುತ + ಆನಂದ ಒಗೆಯುತಿರಲ್ + ಒಬ್ಬ ಮುನಿಯಂ ಕಂಡು ಇದು + ಆವನ + ಆಶ್ರಮ + ಎಂದು ಬೆಸಗೊಂಡಡೆ ವಿಗಡ ವಿಶ್ವಾಮಿತ್ರ ಮುನಿಯ ಬನ + ಎನೆ ಸುಖಂ ಸುಗಿದು ಪೊಯ್ + ಪಡೆದಂತೆ ಹಾವು + ಆಗಿದು ಬಿಟ್ಟಂತೆ ಬಗೆ + ಬೆದಱಿ[ರಿ] ಗುರು + ಆಜ್ಞೆ+ ಕೆಟ್ಟುದು + ಇನ್ನು + ಏಗೆಯ್ವೆನು + ಎಂದನು ಹರಿಶ್ಚಂದ್ರನು

ಪದ್ಯ–೭. ಸತಿ ಮಡಿಸಿ ನೀಡುವ + ಎಲೆ + ಪಿಡಿದ ಕೈ ಬಸವಳಿದುದು + ಅತಿ ಚಿಂತೆಯೊಳು ಮಱೆ[ರೆ]ದ ತನು ಜೊಮ್ಮು ಪಿಡಿದ ಪುರ್ಬು + ಅತಿ ಭಾರ + ಆಗಿ ಕಣ್ಮುಚ್ಚಿ ತೋಳ್ ತೊಡೆ ಮಿಡುಕೆ ಸುಯ್ ಸೂಸೆ ನಿದ್ರೆ ಕವಿದು ವಿತತ ಸುಖದಿಂದ + ಇರುತ + ಇರಲ್ಕೆ ನಾನಾ ದುಃಖಯುತಮ್ + ಅಪ್ಪುದು + ಒಂದು ಕನಸಂ ಕಂಡು ನೊಂದು ಭೂಪತಿ ಬೆದಱಿ[ರಿ]ದಂತೆ ಭೋಂಕ್ + ಎನಲ್ + ಎದ್ದು ಬೆಬ್ಬಳಿಸಿ ನಾಲ್ + ದೆಸೆಯನ್ + ಆರಯ್ದನು

ಪದ್ಯ–೮. ಧುರದೊಳ್ + ಅರಿ ಭೂಭುಜರನು + ಅಂಜಿಸುವ ನಡುಗಿಸುವ ಕೊರಗಿಸುವ ಕೋಡಿಸುವ ಬಳುಕಿಸುವ ಜಳುಕಿಸುವ ಬಿರುದ + ಅಂಕಮಲ್ಲ ನೀ ನಡುಗಲ್ + ಏತಕ್ಕೆ ಪೇಳು + ಎಂದು ಮೆಲ್ಲನೆ ನುಡಿಸಲು ತರುಣಿ ಕೇಳ್ + ಒಂದು ಕನಸಂ ಕಂಡೆನು + ಆ ಕನಸು ನಿರುತ + ಎಂದೇ ಕಣ್ಣ ತೆಱೆ[ರೆ]ದೆ ನೀನ್ + ಇಂತು + ಇದಱ[ರ] ಪರಿಯಂ ವಿಚಾರಿಸು + ಎಂದು + ಅವನೀಶ ನುಡಿಯಲು + ಆ ನುಡಿಗೆ ಸತಿ ಹೂಂ ಕೊಂಡಳು

ಪದ್ಯ–೯. ಘುಡಿ ಘುಡಿಸುತ + ಒಬ್ಬ ಮುನಿ ಬಂದು ನಾನ್ + ಓಲಗಂ + ಕೊಡುವ ಮಣಿಮಂಟಪದ ಕಂಭ + ಎಲ್ಲವನು ತಡೆ ಕಡಿದು ಹೊನ್ + ಕಳಸಂಗಳಂ ಮಾಣದೊಡೆ ಬಡಿದು ನೆರೆದ ಸಭೆಯ + ಒಳಗೆ + ಎನ್ನನು ಕೆಡಹಿ ಸಿಂಹಾಸನವನು ಒಯ್ವ + ಆಗಳ್ + ಎನ್ನ + ಎದೆಯನು + ಅಡರ್ದು + ಒಂದು ಕಾಗೆ ಕರೆದುದು ಬಳಿಕ್ಕ + ಆಂ ಗಿರಿಯನು + ಅಡರ್ದು ಶಿಖರದೊಳ್ + ಎಸೆವ ಮಣಿಗೃಹಂ + ಪೊಕ್ಕೆನ್ + ಇದಱ[ರ] + ಅಂತಸ್ಥವು + ಏನು + ಎಂದನು

ಪದ್ಯ–೧೦. ಬಗೆವಡೆ + ಈ ಕನಸು ಗುರು + ಆಜ್ಞೆಯಂ ಮೀಱಿ[ರಿ]ತಕ್ಕೆ + ಒಗೆವ ಕೇಡಿಂಗೆ ಸೂಚನೆ ಮುನಿಯಬೇಡ ಮಂತ್ರಿಗೆ ಮಗಂಗೆ + ಎನಗೆ ರಾಜ್ಯಕ್ಕೆ ಚತುರಂಗ ಸೇನೆಗೆ ಸಕಲ ಭಂಡಾರಕೆ ನಗರಕ್ಕೆ ಸರ್ವ ಪರಿವಾರಕ್ಕೆ ತೇಜದ + ಏಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ ಮಿಗೆ ಸತ್ಯಮಂ ಬಿಟ್ಟು ಕೆಡದಿರು + ಅವನೀಶ ಕೈ ಮುಗಿದು ಬೇಡಿದೆನು + ಎಂದಳು

* * * *

## ೨. ಪದ ವಿಂಗಡಣಾ ಓದು

**ಪದ್ಯ–೧.** ಕನ್ನಡವು ಹಿರಿದು + ಒಂದು ಸಂಸ್ಕೃತಿ ಕನ್ನಡವು ಹಿರಿದು + ಒಂದು ಜ್ಞಾನವು ಕನ್ನಡದ ಕಸ್ತೂರಿ ಸೌರಭ ಲೋಕ ತುಂಬಿಹುದು ಕನ್ನಡದ ನುಡಿಕಿವಿಗೆ ಮಧುರವು ಕನ್ನಡದ ನುಡಿ ಮಧುರ ಜೇನುವು ಕನ್ನಡದ ಸಿರಿ ಸೊಬಗ ವರ್ಣಿಪರು + ಆರು ಲೋಕದಲಿ

**ಪದ್ಯ–೨.** ಅಲ್ಲಿಗೆ + ಅಲ್ಲಿಗೆ ಕಮಲ ಕೊಳಗಳು ಅಲ್ಲಿಗೆ+ಅಲ್ಲಿಗೆ ಹರಿವ ತೊರೆಗಳು ಅಲ್ಲಿಗೆ+ಅಲ್ಲಿಗೆ ಮೆರವ ಸುಂದರ ಭವ್ಯ ಕಲ್ಯಾಣಿ ಅಲ್ಲಿಗೆ + ಅಲ್ಲಿಗೆ ಮೆರೆವ ತಪವನ ಅಲ್ಲಿಗೆ+ಅಲ್ಲಿಗೆ ಪುಣ್ಯ ನದಿಗಳು ಅಲ್ಲಿಗೆ + ಅಲ್ಲಿಗೆ ಆತ್ಮದರ್ಶಿತ ದಿವ್ಯ ಗುರುವರರು

**ಪದ್ಯ–೩.** ಎಲ್ಲಿ ನೋಡಲಿ ವೀರ + ಕಲ್ಲುಗಳು + ಎಲ್ಲಿ ನೋಡಲಿ ರಕ್ತ ಕೊಡುಗೆಗಳು + ಎಲ್ಲಿ ನೋಡಲಿ ಸತ್ಯಪಥಿಗಳ ದಾನ ಶಾಸನವು ಎಲ್ಲಿ ನೋಡಲಿ ಭವ್ಯ ಶಿಲ್ಪಗಳು + ಎಲ್ಲಿ ನೋಡಲಿ ಕಲೆಯ ಬಲೆಗಳು ಎಲ್ಲಿ ನೋಡಲಿ ಜಗವೆ ಬೆಚ್ಚುವ ಭವ್ಯವಾಸ್ತುಗಳು.

**ಪದ್ಯ–೪.** ಹರಿವ ನದಿ ಭೋರ್ಗರೆತ ಕನ್ನಡ ಸರಸ ಪಕ್ಷಿಗಳ + ಉಲಿಯು ಕನ್ನಡ ಗರುವಿಕೆಯ ವರಕೇಸರಿಯ ಗರ್ಜನೆಯು ಕನ್ನಡವು ಶರಣ ತೋರಿದ ವಚನ ಕನ್ನಡ ಮೆರೆದ ದಾಸರ ಹೃದಯ ಕನ್ನಡ ಧೀರ ವೀರರ ಲೋಕ ಗುರುಗಳ ನೆಲವೆ ಕನ್ನಡವು



### ಪೂರ್ವಕಥೆ

ಒಮ್ಮೆ ದೇವ ಸಭೆ ನಡೆದಿದ್ದಾಗ ಇಂದ್ರನು "ಭೂಲೋಕದಲ್ಲಿ ಸತ್ಯವಂತ ಅರಸ ಯಾರು?" ಎಂದು ವಸಿಷ್ಠರಲ್ಲಿ ವಿಚಾರಿಸಿದನು. ಆಗ ಅವನು "ಅಯೋಧ್ಯೆಯನ್ನಾಳುತ್ತಿರುವ ಹರಿಶ್ಚಂದ್ರನ ಹೆಸರನ್ನು ಹೇಳಿ ಆತನ ಸತ್ಯನಿಷ್ಠೆಯನ್ನು ವಿವರಿಸಿದನು. ವಸಿಷ್ಠ ಹೇಳಿದ್ದನ್ನೆಲ್ಲ ವಿರೋಧಿಸುವ ಸ್ವಭಾವದವನಾದ ವಿಶ್ವಾಮಿತ್ರ ಅದನ್ನು ಅಲ್ಲಗಳೆದನು. ಸಾಲದ್ದಕ್ಕೆ **ಹರಿಶ್ಚಂದ್ರನ ಬಾಯಿಂದ ಸುಳ್ಳನ್ನು ಹೇಳಿಸಿಯೇ ಸಿದ್ಧ** ಎಂದು ಪಂಥವೊಡ್ಡಿದನು.

ಹರಿಶ್ಚಂದ್ರನು ಲೋಕ ಕಲ್ಯಾಣಾರ್ಥವಾಗಿ ತನ್ನ ಅರಮನೆಯಲ್ಲಿ ನಡೆಸುತ್ತಿದ್ದ ಬಹು ಸುವರ್ಣಯಾಗಶಾಲೆಗೆ ವೇಷಮರೆಸಿಕೊಂಡು ಬಂದು ಬಹುದೊಡ್ಡ ದಾನವನ್ನು ಕೇಳಿ ಕೊಡಲಾಗದ ಸ್ಥಿತಿಗೆ ಆತನನ್ನು ತಂದೊಡ್ಡಿ ಸತ್ಯವ್ರತಕ್ಕೆ ಭಂಗ ತರಬೇಕೆಂದು ವಿಶ್ವಾಮಿತ್ರನು ಯೋಚಿಸಿದನು. ಆದರೆ ಹರಿಶ್ಚಂದ್ರ ಆತ ಕೇಳಿದಷ್ಟೆಲ್ಲವನ್ನೂ ಭಯಭಕ್ತಿಯಿಂದ ನೀಡಿ ಸೈ ಎನಿಸಿಕೊಂಡನು.

ಹೀಗೆ ಮೊದಲ ಪ್ರಯತ್ನದಲ್ಲೇ ಎಡವಿದ ವಿಶ್ವಾಮಿತ್ರ ಹೇಗಾದರೂ ಮಾಡಿ ಆತನನ್ನು ಮಣಿಸಲೇ ಬೇಕೆಂದುಕೊಂಡು ಇನ್ನೊಂದು ತಂತ್ರವನ್ನು ಹೂಡಿದನು. ಬೇಟೆಯ ನೆವದಲ್ಲಿ ಹರಿಶ್ಚಂದ್ರನನ್ನು ಕಾಡಿನಲ್ಲಿ ಅಲೆದಾಡಿಸಿ ಕಾಡಬೇಕೆಂದು ಯೋಚಿಸಿದನು. ವಿವಿಧ ಮೃಗಪಕ್ಷಿಗಳನ್ನು ಸೃಷ್ಟಿಸಿ ನಾಡಿನ ಬೆಳೆಗಳನ್ನು ಕೆಡಿಸುವಂತೆ ಮಾಡಿದರೆ ರೈತಾಪಿ ಜನರು ರಾಜನಿಗೆ ಮೊರೆಯಿಡುತ್ತಾರೆ. ಆಗ ಹರಿಶ್ಚಂದ್ರ ಬೇಟೆಗೆಂದು ಕಾಡಿಗೆ ಬಂದೇ ಬರುತ್ತಾನೆ ಎಂದು ನಿಶ್ಚಯಿಸಿದ ವಿಶ್ವಾಮಿತ್ರ ಕೂಡಲೇ ಕಾರ್ಯಪ್ರವೃತ್ತನಾದನು. ಆತನ

ತಪಃಪ್ರಭಾವದಿಂದ ಕಣ್ಮುಚ್ಚಿ ತೆರೆಯುವುದರೊಳಗೆ ನಾನಾವಿಧವಾದ ಪ್ರಾಣಿಪಕ್ಷಿಗಳು ಹುಟ್ಟಿಕೊಂಡು ನಾಡಿನ ಕೃಷಿಭೂಮಿಗೆ ಲಗ್ಗೆಯಿಟ್ಟವು. ಇದರಿಂದಾಗಿ ಎಲ್ಲೆಲ್ಲೂ ಹಾಹಾಕಾರವೆದ್ದಿತು. ರೈತರೆಲ್ಲರು ಅರಮನೆಗೆ ಬಂದು ತಮ್ಮ ದೊರೆಯ ಮುಂದೆ ಗೋಳಿಟ್ಟರು.

ನಾಡಿನ ಅನ್ನದಾತರ ಮೊರೆಯನ್ನು ತಾಳ್ಮೆಯಿಂದ ಆಲಿಸಿದ ಹರಿಶ್ಚಂದ್ರನು ತನ್ನ ಹೆಂಡತಿ, ಮಗ ಹಾಗೂ ಪರಿವಾರದೊಂದಿಗೆ ಬೇಟೆಗೆ ಹೊರಡಲು ನಿರ್ಧರಿಸಿದನು. ಕಾಡುದಾರಿಯಲ್ಲಿ ಸಿಗುವ ವಸಿಷ್ಠಾಶ್ರಮಕ್ಕೆ ಭೇಟಿ ನೀಡಿ ಗುರುಗಳ ಆಶೀರ್ವಾದ ಪಡೆದನು. ಅವರಿಂದ "ಅಯ್ಯಾ ನಿನ್ನ ಕುಲಾಚಾರಕ್ಕೆ ಧಕ್ಕೆಯಾಗದಂತೆ ನಡೆದುಕೊ. ಸತ್ಯನಿಷ್ಠೆಯನ್ನು ಉಳಿಸಿಕೊ. ಮುಂದೆ ದಾರಿಯಲ್ಲಿ ಸಿಗುವ ವಿಶ್ವಾಮಿತ್ರನ ಆಶ್ರಮ ಪ್ರದೇಶಕ್ಕೆ ತಪ್ಪಿಯೂ ಕಾಲಿರಿಸಬೇಡ" ಎಂಬ ಎಚ್ಚರಿಕೆಯ ಸೂಚನೆಯನ್ನೂ ಪಡೆದು ಪರಿವಾರದೊಂದಿಗೆ ಬೇಟೆಗೆ ಹೊರಟನು. ಮುಂದೇನಾಯಿತೆಂಬುದನ್ನು ಇಲ್ಲಿ ಆಯ್ಕೆ ಮಾಡಿದ ಪದ್ಯಗಳು ತಿಳಿಸುತ್ತವೆ.

## ಕರ್ತೃ – ಭಾವ – ಆಕರ

**ರಾಘವಾಂಕ** ನಡುಗನ್ನಡದ ಅಗ್ರಮಾನ್ಯ ಕವಿಗಳಲ್ಲಿ ಒಬ್ಬ (ಕ್ರಿಸ್ತ ಶಕ ಸುಮಾರು ೧೨೨೫). ಹಂಪಿ ಕ್ಷೇತ್ರದವನು ಪಂಪಾಪತಿ ವಿರೂಪಾಕ್ಷನ ಪರಮಭಕ್ತ. **ರಗಳೆ** ಕವಿಯೆಂದೆನಿಸಿದ ಹರಿಹರನ ಸೋದರಳಿಯ ಮತ್ತು ಶಿಷ್ಯ. ವಿರೂಪಾಕ್ಷನ ಪರಮಭಕ್ತ. **ಹರಿಶ್ಚಂದ್ರಕಾವ್ಯ, ಸಿದ್ಧರಾಮಚಾರಿತ್ರ, ವೀರೇಶ್ವರಚರಿತೆ, ಸೋಮನಾಥಚರಿತೆ, ಶರಭಚಾರಿತ್ರ, ಹರಿಹರ ಮಹತ್ವ** ಮುಂತಾದ ಕಾವ್ಯಗಳನ್ನು ಷಟ್ಪದಿ ಛಂದಸ್ಸುಗಳಲ್ಲಿ ರಚಿಸಿದ್ದಾನೆ. **ಉಭಯ ಕವಿ ಕಮಲ ರವಿ, ಕವಿ ಶರಭ ಭೇರುಂಡ, ಷಟ್ಪದಿ ಬ್ರಹ್ಮ** ಅಭಿದಾನಗಳನ್ನು ಹೊಂದಿದ್ದು ಷಟ್ಪದಿ ಕಾವ್ಯದ ನಿರ್ಮಾಪಕನೆಂಬ ಅಗ್ಗಳಿಕೆಗೆ ಪಾತ್ರನಾದ ಕವಿ.



*    *    *    *



**ಸತ್ಯ ವಿಠಲ ಅಂಕಿತದಿಂದ** ಪ್ರಸಿದ್ಧರಾಗಿರುವ **ಬಿ. ವಿ. ಸತ್ಯನಾರಾಯಣರಾವ್** ಅವರು (೧೯೪೮) ತುಮಕೂರು ಜಿಲ್ಲೆ ಶಿರಾ ತಾಲೂಕಿನ **ಬುಕ್ಕಾಪಟ್ಟಣ**ದವರು. ಮೆಕಾನಿಕಲ್ ಇಂಜಿನಿಯರಿಂಗ್ ಪದವೀಧರರಾದ ಇವರು ಪ್ರಕೃತ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದಲ್ಲಿ ಉಪಪ್ರಧಾನ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸಿ ನಿವೃತ್ತರಾಗಿರುವರು. **ಗೀತ, ಸ್ತೋತ್ರ, ಕಾವ್ಯ, ಲಾವಣಿ, ಗದ್ಯ** ಹೀಗೆ ವಿವಿಧ ಪ್ರಕಾರಗಳಲ್ಲಿ **ಅರವತ್ತು ಕೃತಿ**ಗಳನ್ನು ರಚಿಸಿದ್ದಾರೆ. **ಹನ್ನೊಂದು ಭಾಮಿನಿ ಕಾವ್ಯಗಳನ್ನೂ ಬಸವ ಭಾರತಿ** ಸುದೀರ್ಘ **ಲಾವಣಿ ಕಾವ್ಯ**ವನ್ನೂ **ಸಂಪೂರ್ಣ ದೇವೀ ಮಹಾತ್ಮೆ, ಬಸವೇಶ್ವರ ಲೀಲಾ ವೈಭವಂ, ಲಂಕೇಶ್ವರ ಸೋಮನಾಥ ಚಾರಿತ್ರ** ಮುಂತಾದ ಕಾವ್ಯಗಳನ್ನೂ ರಚಿಸಿದ್ದಾರೆ. ಕನ್ನಡ – ಸಂಸ್ಕೃತ ಭಾಷೆಗಳೆರಡರಲ್ಲೂ ಪಾಂಡಿತ್ಯವುಳ್ಳವರು. **ಬಾಹುಬಲಿಚರಿತಂ, ಗಾಯತ್ರೀರಾಮಾಯಣ, ಸಿರಿಗನ್ನಡ ವೈಜಂತಿ, ಕನ್ನಡನಾಡಚರಿತ್ರೆ, ತತ್ವಭಾರತಿ, ಭಾವಗೀತಗಳು, ಶ್ರೀಶಿವಕುಮಾರಸ್ವಾಮಿಗುರುಚರಿತಂ, ಗುರುದತ್ತಚರಿತಂ** ಇವರ ಪ್ರಮುಖ ಕೃತಿಗಳು ನೃತ್ಯರೂಪಕ ಹಾಗೂ ನಾಮಾವಳಿಗಳನ್ನು ರಚಿಸಿದ್ದಾರೆ.

*    *    *    *

ಹರಿಶ್ಚಂದ್ರ ಕಾವ್ಯದಲ್ಲಿ ಸತ್ಯಪರಿಪಾಲನೆಯ ಪರಾಕಾಷ್ಠೆಯನ್ನು ಕಾಣುತ್ತೇವೆ. "ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು" ಎಂದು ಸಾಧಿಸಿ ತೋರಿದ ಮಹಾ ಸತ್ಯಸಂಧ ಹರಿಶ್ಚಂದ್ರನಿಗೆ ಅವನ ರಾಣಿ ಚಂದ್ರಮತಿಯೇ ನೈತಿಕ ಸ್ಫೂರ್ತಿಯಾಗಿದ್ದಳು. ಬೇಟೆಗೆಂದು ಪರಿವಾರದೊಂದಿಗೆ ಅರಣ್ಯಕ್ಕೆ ತೆರಳಿದ ಹರಿಶ್ಚಂದ್ರ ಅರಿಯದೆ ವಿಶ್ವಾಮಿತ್ರನ ಆಶ್ರಮ ಪ್ರದೇಶವನ್ನು ತುಳಿಯುತ್ತಾನೆ. ಆಗ ಅವನಿಗೆ ಗುರುವಾಜ್ಞೆ ಮೀರಿ ಬಂದುದರ ಅರಿವಾಗುತ್ತದೆ. ಮುಂದೆ ಒದಗಬಹುದಾದ ವಿಪತ್ತನ್ನು ನೆನೆದು ಚಿಂತಿತನಾಗುತ್ತಾನೆ. ಅದೇ ಸಂದರ್ಭದಲ್ಲಿ ಕಂಡ ಕನಸನ್ನು ವಿವರಿಸಿ ಇದರ ಪರಿಯನ್ನು ತಿಳಿಸೆಂದು ರಾಣಿ ಚಂದ್ರಮತಿಯಲ್ಲಿ ಕೇಳಿಕೊಳ್ಳುತ್ತಾನೆ. ಆ ಸಾಧ್ವಿಯು ಪತಿಗೆ ನೀಡುವ ಸಲಹೆ ಭಾರತೀಯ ನಾರಿಯರ ಹಿರಿಮೆಯನ್ನು ಜಗದಗಲಕ್ಕೆ ಸಾರುವಂತಿದೆ. "ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ" ಎಂಬ ಮನಕಲಕುವ ಅವಳ ಮಾತು ಹರಿಶ್ಚಂದ್ರನ ಬದುಕಿಗೆ ಹೊಸ ತಿರುವನ್ನೇ ನೀಡಿದೆ. ಕವಿ ರಾಘವಾಂಕನ ಕೈಯಲ್ಲಿ ಈ ಭಾಗ ಮನೋಜ್ಞವಾಗಿ ಮೂಡಿದೆ.

* * * *

ಭಾಮಿನಿ ಷಟ್ಪದಿ ಕಾವ್ಯದ ಸೊಗಸು ಈ ಭಾಗದಲ್ಲಿದೆ. **ಕವಿ ಬಿ.ವಿ. ಸತ್ಯನಾರಾಯಣ ರಾವ್** ಅವರು ರಚಿಸಿದ **ಸಂಪೂರ್ಣ ದೇವೀ ಮಹಾತ್ಮೆ** ಕಾವ್ಯದ ಆರಂಭದಲ್ಲಿ ಕನ್ನಡ ನಾಡಿನ ಸಂಸ್ಕೃತಿ, ಪ್ರಕೃತಿ ಸಂಪತ್ತು, ಐತಿಹಾಸಿಕ ದಾಖಲೆಗಳು, ಕನ್ನಡದ ಹಿರಿಮೆ ಗರಿಮೆಯನ್ನು ಹಾಡಿಹೊಗಳಿದ್ದಾರೆ.



* * * *

ಪ್ರಕೃತ **ಕಾವ್ಯ ಸಂಗಮ** ಶೀರ್ಷಿಕೆಯ ಪದ್ಯಗಳನ್ನು **ಕವಿ ರಾಘವಾಂಕ** ವಿರಚಿತ; ಆಸ್ಥಾನ ಪಂಡಿತ ಸರ್ವದರ್ಶನ ತೀರ್ಥ ವೈ ನಾಗೇಶ ಶಾಸ್ತ್ರಿಗಳು ಬಳ್ಳಾರಿ, ವಿದ್ವಾನ್ ಎಂ.ಜಿ. ವೆಂಕಟೇಶಯ್ಯ ಬಳ್ಳಾರಿ– ಇವರು ಸಂಪಾದಿಸಿದ **ಹರಿಶ್ಚಂದ್ರ ಕಾವ್ಯದಿಂದ** (ಪುಟ ೬೮ – ೭೯) (ಷಟ್ಪದಿ ೦೧, ೨೭, ೨೮, ೩೦, ೩೪, ೪೪, ೫೨, ೫೪, ೫೫ ಮತ್ತು ೫೭) ಆಯ್ದು ಸಂಯೋಜಿಸಿ ನಿಗದಿಪಡಿಸಿದೆ.

* * * *

ಪ್ರಕೃತ **ಕಾವ್ಯ ಸಂಗಮ** ಶೀರ್ಷಿಕೆಯ ಪದ್ಯಗಳನ್ನು **ಬಿ. ವಿ. ಸತ್ಯನಾರಾಯಣರಾವ್** ಅವರ **ಸಂಪೂರ್ಣ ದೇವೀ ಮಹಾತ್ಮೆ** ಕೃತಿಯ **ಪ್ರಥಮ ಚರಿತ್ರದ, ತ್ರಿಮೂರ್ತಿಗಳ ಜನನ** ಭಾಗದಿಂದ (ಪುಟ ೦೫ – ೦೬) (ಷಟ್ಪದಿ – ೦೨, ೦೩, ೦೪ ಮತ್ತು ೦೬) ಆಯ್ದು ಸಂಯೋಜಿಸಿ ನಿಗದಿಪಡಿಸಿದೆ.

## ಪದ – ಪದ್ಯಾರ್ಥ

**ಪದ್ಯ–೧.** ನೇಮ–ಅಪ್ಪಣೆ; ಭಾಸುರ–ಅಂದ, ಸೊಗಸು; ವರೂಥ–ರಥ; ಪರಿಕರ–ಸಜ್ಜು, ಸಿದ್ಧತೆ; ವಿಪಿನ–ಅರಣ್ಯ; ಹರೆದು–ಹರಿದು, ಚದುರಿಹೋಗಿ; ವರಾಹ–ಹಂದಿ; ಭೂರಮಣ–ರಾಜ

**ಪದ್ಯ–೨.** ಮಸೆ–ಹರಿತ ಮಾಡಲು ಉಜ್ಜುವುದು; ದಾಡೆ–ಕೋರೆಹಲ್ಲು; ಘೂರ್ಮಿಸು–ಗರ್ಜಿಸು; ಕರ್ಬೊಗೆ–ಕಪ್ಪಾದಹೊಗೆ; ದಳ್ಳುರಿ–ಕಾಳ್ಗಿಚ್ಚು, ದಟ್ಟವಾದ ಬೆಂಕಿ; ಮುಸುಡು–ಮುಖ; ಮಿಳ್ಳಿಸು–ನಿಮಿರು; ತೊತ್ತಳ–ಕಾಲಿನ ತುಳಿತದಿಂದ ನುಗ್ಗುನುರಿಯಾದುದು; ಲುಬ್ಧಕ–ಬೇಡ

ಪದ್ಯ–೩. ಕೆಡಹು–ಬೀಳಿಸು; ಕೋಪಾಟೋಪ–ಸಿಟ್ಟಿನ ಅಬ್ಬರ; ಮಾಱು[ರು]ದ್ದಿ–ಉಜ್ಜಿದ; ಕೋದಂಡ–ಬಿಲ್ಲು, ಧನಸ್ಸು; ಕರ–ಕೈ; ಮೂಡಿಗೆ–ಬತ್ತಳಿಕೆ; ಮಡಲಿರಿ–ಒಟ್ಟುಗೂಡಿಸು; ಕೈಹೊಡೆ–ಬಾಣಬಿಡು, ಪ್ರಯೋಗಿಸು; ಬಿದ್ದು–ಔತಣ; ಭೂವಲ್ಲಭ–ದೊರೆ; ದಿಗುಪಾಲರು–ದಿಕ್ಕುಗಳ ಪಾಲಕರು; ಅಳವಳಿಸು–ದು:ಖಿಸು, ವ್ಯಥೆಪಡು

ಪದ್ಯ–೪. ಗರಳ–ವಿಷ; ಕೊರಳು–ಕುತ್ತಿಗೆ; ಗರಳಗೊರಳ–ಶಿವ, ವಿಷಕಂಠ; ತರಣಿ–ಸೂರ್ಯ; ಸರಳು–ಬಾಣ; ಉರ್ಚು– ಚುಚ್ಚು ; ತೊರಳೆ–ದೇಹದ ಒಂದುಭಾಗ, ಗುಲ್ಮ, ಪ್ಲೀಹ; ಅಡಸು–ಬಿಗಿಯಾಗಿ ಒತ್ತು,ಚುಚ್ಚು; ತರಲ–ಚಂಚಲವಾದ; ಚಿತ್ತ–ಮನಸ್ಸು

ಪದ್ಯ–೫. ಬಳಿಚಿದ–ಕತ್ತರಿಸಿದ; ಅಂಬು–ಬಾಣ; ಎಕ್ಕಲ–ಕಾಡುಹಂದಿ; ಡಗೆ–ಎದೆಉರಿ; ಧೃತಿ–ಧೈರ್ಯ; ಆಸರು–ಆಯಾಸ; ವಿಭವ–ಘನತೆ, ಶ್ರೇಷ್ಠತೆ; ಅಳವಿ–ಹತ್ತಿರ, ಸಮೀಪ

ಪದ್ಯ–೬. ಒಗೆ–ಕಾಣಿಸಿಕೊಳ್ಳು; ಸುಗಿ–ಮಾಯವಾಗು, ಇಲ್ಲವಾಗು ; ಪೊಯ್–ಹೊಡೆತ, ಬಗೆ–ಮನಸ್ಸು

ಪದ್ಯ–೭. ಮಡಿಸಿ–ಮಡಚಿ; ಬಸವಳಿ–ಆಯಾಸಗೊಳ್ಳು, ಶಕ್ತಿಗುಂದು; ಜೊಮ್ಮು– ಜೊಂಪು, ನಿದ್ರೆ ; ಪುಬ್ಬು–ಹುಬ್ಬು; ಸುಯ್–ಶ್ವಾಸಬಿಡು, ಏದುಸಿರುಬಿಡು; ಸೂಸು–ಚೆಲ್ಲು; ವಿತತ–ವಿಸ್ತಾರವಾದ; ಬೆಬ್ಬಳಿಸು–ಗಾಬರಿಯಾಗು; ಆರಯ್–ಹುಡುಕು.

ಪದ್ಯ–೮. ಧುರ–ಯುದ್ಧ; ಕೋಡಿಸು–ಹೊರನೂಕು; ಬಳುಕಿಸು–ಬಾಗಿಸು; ಜುಳುಕಿಸು–ನಡುಗಿಸು; ಬಿರುದಂಕಮಲ್ಲ–ಪ್ರಸಿದ್ಧನಾದ ಜಟ್ಟಿ; ನಿರುತ–ನಿಜ.

ಪದ್ಯ–೯. ಅಡರ್–ಏರು

ಪದ್ಯ–೧೦. ಬಗೆ–ಯೋಚಿಸು

## ಪಠ್ಯಾಧಾರಿತ ಟಿಪ್ಪಣಿ

**ವಸಿಷ್ಠ:** ಈತ ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬನು. ಬ್ರಹ್ಮರ್ಷಿಯೂ ಸಪ್ತರ್ಷಿಗಳಲ್ಲೊಬ್ಬನೂ ಆದ ಈತ ಮಂತ್ರ ದ್ರಷ್ಟಾರನೂ ಹೌದು. ಮಹಾ ಪತಿವ್ರತೆಯಾದ ಅರುಂಧತಿ ಈತನ ಪತ್ನಿ. ಇಕ್ಷ್ವಾಕು ವಂಶದ ರಾಜರಿಗೆ ಈತ ಕುಲಪುರೋಹಿತನಾಗಿದ್ದನು. ಹರಿಶ್ಚಂದ್ರನ ಸತ್ಯ ಸಂಧತೆಯ ಕುರಿತು ವಿಶ್ವಾಮಿತ್ರನೊಡನೆ ವಾಗ್ವಾದ ನಡೆದು ಕೊನೆಯಲ್ಲಿ ವಸಿಷ್ಠನಿಗೇ ಜಯ ಲಭಿಸುತ್ತದೆ.

**ವಿಶ್ವಾಮಿತ್ರ:** ಈತ ಮಹರ್ಷಿ, ಚಂದ್ರವಂಶದ ಗಾಧಿರಾಜನ ಮಗ. ಇವನಿಗೆ ಮೊದಲು ವಿಶ್ವರಥ ಎಂಬ ಹೆಸರಿತ್ತು. ಕ್ಷತ್ರಿಯನಾದ ಈತ ತಪಸ್ಸಿನಿಂದ ಬ್ರಾಹ್ಮಣನಾದ. ಕುಶಿಕರಾಜನ ವಂಶದಲ್ಲಿ ಜನಿಸಿದ್ದ ಈತನಿಗೆ **ಕೌಶಿಕ** ಎಂಬ ಹೆಸರೂ ಇದೆ. ಮಂತ್ರ ದ್ರಷ್ಟಾರನಾದ ಈತ ಸಪ್ತರ್ಷಿಗಳಲ್ಲಿ ಒಬ್ಬ. ಹರಿಶ್ಚಂದ್ರನ ಸತ್ಯವ್ರತವನ್ನು ಕೆಡಿಸಲು ಕುಟಿಲ ತಂತ್ರಗಳನ್ನು ಹೂಡಿ ವಿಫಲನಾಗುತ್ತಾನೆ.

**ಹರಿಶ್ಚಂದ್ರ:** ಈತ ಸೂರ್ಯವಂಶದ ಅರಸ ತ್ರಿಶಂಕು ಮಹಾರಾಜನ ಮಗ. ಸತ್ಯವತಿ ಈತನ ತಾಯಿ. ಚಂದ್ರಮತಿ ಪತ್ನಿ. ವರುಣನ ವರದಿಂದ ಜನಿಸಿದ ಲೋಹಿತಾಶ್ವ ಈತನ ಮಗ. ಸತ್ಯ ನಿಷ್ಠೆಗೆ ಇನ್ನೊಂದು ಹೆಸರು ಹರಿಶ್ಚಂದ್ರ ಎಂಬ ಲೋಕಪ್ರಸಿದ್ಧಿ ಈತನದು.

**ದಿಗುಪಾಲರು – ಅಷ್ಟದಿಕ್ಪಾಲಕರು :** ೧. ಇಂದ್ರ ೨. ಅಗ್ನಿ ೩. ಯಮ ೪. ನಿಋತಿ ೫. ವರುಣ ೬. ವಾಯು ೭. ಕುಬೇರ ೮. ಈಶಾನ

**ಗರಳಗೊರಳ :** ಗರಳ–ವಿಷ, ಗೊರಳ–ಕಂಠ **ಗರಳ** + **ಕೊರಳ** = ವಿಷಕಂಠ = ಶಿವ

**ಮಕರಧ್ವಜ** – ಮಕರ(ಮೊಸಳೆ)ದ ಗುರುತುಳ್ಳ ಧ್ವಜವನ್ನು ಹೊಂದಿದವ – ಹರಿಶ್ಚಂದ್ರ ಭೂಪಾಲ

**ಅರಳಸರಳ** – ಹೂವನ್ನೇ ಬಾಣವಾಗಿ ಉಳ್ಳವನು, ಪುಷ್ಪಬಾಣ, ಮನ್ಮಥ.



## ಅಭ್ಯಾಸ

- **ಪೋಷಕ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಸ್ತುನಿಷ್ಠ ಪ್ರಶ್ನೆಗಳು**

**ಅ. ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿ**

೧. ಕೌಶಿಕ ಮುನೀಶ್ವರನೊಂದು __________ ಮಾಡಿ ಕಳುಹಿದನು.

೨. ಬಗೆಬೆದರಿ __________ ಗೆಟ್ಟುದಿನ್ನೇಗೈವೆನೆಂದನು.

೩. ಭೋಂಕೆನಲೆದ್ದು __________ ನಾಲ್ದೆಸೆಯನಾರಯ್ದನು.

೪. ಮಿಗೆ __________ ಬಿಟ್ಟು ಕೆಡದಿರವನೀಶ.

೫. ಎಲ್ಲಿ ನೋಡಲಿ __________ ದಾನಶಾಸನವು.

ಆ. ಹೊಂದಿಸಿ ಬರೆಯಿರಿ

| | 'ಅ' ಪಟ್ಟಿ | 'ಆ' ಪಟ್ಟಿ |
|---|---|---|
| ೧. | ರಾಘವಾಂಕ | ದೇವಿಮಹಾತ್ಮೆ |
| ೨. | ಜನ್ನ | ಗದುಗಿನ ಭಾರತ |
| ೩. | ಸತ್ಯವಿಠಲ | ಹರಿಶ್ಚಂದ್ರ ಕಾವ್ಯ |
| ೪. | ರತ್ನಾಕರವರ್ಣಿ | ಗದಾಯುದ್ಧ |
| | | ಯಶೋಧರ ಚರಿತೆ |
| | | ಭರತೇಶವೈಭವ |

- **ಪ್ರೇರಣಾ ಅಭ್ಯಾಸ**
- **ಕಲಿತ ನಿಗದಿತ ಮೂಲ ಪಠ್ಯದ ವಿಷಯಗ್ರಹಣ ಪ್ರಶ್ನೆಗಳು**

**ಅ. ಕೊಟ್ಟಿರುವ ಪ್ರಶ್ನೆಗಳಿಗೆ ಎಂಟು/ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ವಿಶ್ವಾಮಿತ್ರನ ಆಶ್ರಮ ಪ್ರದೇಶಕ್ಕೆ ಕಾಲಿಟ್ಟ ಅನಂತರ ಹರಿಶ್ಚಂದ್ರ ಎದುರಿಸಿದ ಸಂಕಷ್ಟಗಳನ್ನು ವಿವರಿಸಿ.

೨. ಕನ್ನಡನಾಡಿನ ಸಿರಿ ಸೊಬಗನ್ನು ಕವಿ ಹೇಗೆ ವರ್ಣಿಸಿದ್ದಾರೆ?



**ಆ. ಕೊಟ್ಟಿರುವ ಪ್ರಶ್ನೆಗಳಿಗೆ ಐದು/ಆರು ವಾಕ್ಯಗಳಲ್ಲಿ ಉತ್ತರಿಸಿ**

೧. ಹರಿಶ್ಚಂದ್ರ ಭೂಪಾಲ ವನಬೇಟೆಗೆ ಹೊರಟ ಸಂದರ್ಭವನ್ನು ವಿವರಿಸಿ.

೨. ಚಂದ್ರಮತಿ ಹರಿಶ್ಚಂದ್ರನಲ್ಲಿ ಏನೆಂದು ಬೇಡಿಕೊಂಡಳು?

೩. ಕನ್ನಡ ನಾಡಿನ ಐತಿಹಾಸಿಕ ಚಿತ್ರಣವನ್ನು ಸತ್ಯವಿಠಲ ಅವರು ಹೇಗೆ ವರ್ಣಿಸಿದ್ದಾರೆ?

**ಇ. ಕೊಟ್ಟಿರುವ ಪ್ರಶ್ನೆಗಳಿಗೆ ಎರಡು/ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಹರಿಶ್ಚಂದ್ರನಿಗೆ ಬನದಲ್ಲಿ ತನುಬೆವರಿ ಮುಖಬಾಡಿತು ಏಕೆ?

೨. ಸತ್ಯವಿಠಲರು ಜಲಸಂಪತ್ತನ್ನು ಏನೆಂದು ಬಣ್ಣಿಸಿದ್ದಾರೆ?

೩. ಬಾಣದ ಹೊಡೆತ ತಿಂದ ಹಂದಿ ಕಾನನದಲ್ಲಿ ಹೇಗೆ ಮರೆಯಾಯಿತು?

೪. ಗುರುವಾಜ್ಞೆ ಮೀರಿದೆನೆಂದು ತಿಳಿದಾಗ ಹರಿಶ್ಚಂದ್ರನ ಸ್ಥಿತಿ ಹೇಗಾಯಿತು?

೫. ಕನ್ನಡ ಭಾಷೆ– ಸಾಹಿತ್ಯದ ಬಗೆಗೆ ಸತ್ಯವಿಠಲರ ಅಭಿಪ್ರಾಯವೇನು?

**ಈ. ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ**

೧. ಹರಿಶ್ಚಂದ್ರನು ಗುರು ವಸಿಷ್ಠರಿಂದ ಏತಕ್ಕಾಗಿ ನೇಮವನ್ನು ಪಡೆದನು?

೨. ದಿಕ್ಪಾಲರ ಅಳವು ಅಳಿದುದೇಕೆ?

೩. ಹರಿಶ್ಚಂದ್ರನು ಅಡವಿಯಲ್ಲಿ ಎಂತಹ ತಪೋವನವನ್ನು ಕಂಡನು?

೪. 'ಇನ್ನೇನು ಮಾಡಲಿ' ಎಂದು ಹರಿಶ್ಚಂದ್ರನು ನೊಂದು ನುಡಿದುದು ಏಕೆ?

೫. ಹರಿಶ್ಚಂದ್ರನು ಕಂಡ ಕನಸು ಯಾವುದಕ್ಕೆ ಸೂಚನೆಯೆಂದು ಚಂದ್ರಮತಿ ಹೇಳಿದಳು?

೬. ಕನ್ನಡ ನಾಡಿನ ವಾಸ್ತುಗಳ ಹಿರಿಮೆಯೇನು?

**ಉ. ಕೊಟ್ಟಿರುವ ಸಾಲುಗಳ ಸಂದರ್ಭವನ್ನು ಸ್ವಾರಸ್ಯ ಸಹಿತ ಬರೆಯಿರಿ**

೧. "ಅಲ್ಲಿಗಲ್ಲಿಗೆ ಪುಣ್ಯ ನದಿಗಳು"

೨. "ಇದಾವನಾಶ್ರಮ"

೩. "ತರುಣಿ ಕೇಳೊಂದು ಕನಸಂ ಕಂಡೆ"

೪. "ಜಗವೆ ಬೆಚ್ಚುವ ಭವ್ಯ ವಾಸ್ತುಗಳು"

## ಸೈದ್ಧಾಂತಿಕ ಭಾಷಾಭ್ಯಾಸ

(ಛಂದಸ್ಸು ಮುಂದುವರಿದುದು)

### ಷಟ್ಪದಿ

ಷಟ್ಪದಿ ಮಾತ್ರಾಗಣಕ್ಕೆ ಸೇರಿದ ಪದ್ಯ ಪ್ರಕಾರ. ಆರಂಭದಲ್ಲಿ ಅಂಶಗಣಾನ್ವಿತವಾಗಿದ್ದ ಷಟ್ಪದಿ ಕ್ರಮೇಣ ಮಾತ್ರಾಗಣಕ್ಕೆ ತಿರುಗಿ ಪ್ರಭೇದಗಳನ್ನು ಪಡೆದುಕೊಂಡಿತು.

ಷಟ್ಪದಿಯಲ್ಲಿ **ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ** ಎಂಬ **ಆರು** ವಿಧಗಳಿವೆ.

- ಷಟ್–ಆರು, ಪದಿ–ಸಾಲು, ಆರುಸಾಲುಗಳ ಪದ್ಯ –ಷಟ್ಪದಿ.
- ೧. ೨. ೪ ಮತ್ತು ೫ನೆಯ ಸಾಲುಗಳು ಸಮನಾಗಿರುತ್ತವೆ.
- ೩ ಮತ್ತು ೬ನೆಯ ಸಾಲುಗಳು ಸಮನಾಗಿದ್ದು, ಉಳಿದ ಸಾಲುಗಳ ಒಂದೂವರೆಯಷ್ಟು ಮತ್ತು ಒಂದು ಗುರುವಿನಿಂದ ಕೂಡಿರುತ್ತದೆ.
- ೩ ಮತ್ತು ೬ನೆಯ ಸಾಲುಗಳ ಕೊನೆಯ ಅಕ್ಷರ ಲಘುವಾಗಿದ್ದರೂ ಗುರು ಎಂದೇ ಪರಿಗಣಿಸಬೇಕು.
- ಒಟ್ಟು ಪದ್ಯದ ಮೊದಲ ಮೂರು ಸಾಲುಗಳನ್ನು ಪೂರ್ವಾರ್ಧವೆಂದೂ ಕೊನೆಯ ಮೂರು ಸಾಲುಗಳನ್ನು ಉತ್ತರಾರ್ಧವೆಂದೂ ತಿಳಿಯಲಾಗುವುದು.
- ಆದಿಪ್ರಾಸ ನಿಯತವಾಗಿರುತ್ತದೆ.

## ಭಾಮಿನಿ ಷಟ್ಪದಿ

೧, ೨, ೪ ಮತ್ತು ೫ನೆಯ ಸಾಲುಗಳಲ್ಲಿ ಮೂರು ಮಾತ್ರೆಗಳ ಗಣದ ಅನಂತರ ನಾಲ್ಕು ಮಾತ್ರೆಗಳ ಗಣಗಳು ಅನುಕ್ರಮವಾಗಿ ಎರಡೆರಡು ಬರುತ್ತವೆ.

೩. ಮತ್ತು ೬ ನೆಯ ಸಾಲುಗಳಲ್ಲಿ ಮೂರು ಮಾತ್ರೆಗಳ ಗಣದ ಅನಂತರ ನಾಲ್ಕು ಮಾತ್ರೆಗಳ ಗಣಗಳು ಅನುಕ್ರಮವಾಗಿ ಮೂರು ಮೂರು ಇದ್ದು, ಕೊನೆಯಲ್ಲಿ ಒಂದು ಗುರುವಿನಿಂದ ಕೂಡಿರುತ್ತದೆ.

ಉದಾ:

| ∪∪∪ | ∪∪– | –∪ | ∪ ∪ – |
|---|---|---|---|
| ವರದೆ | ವರಕಾ | ವೇರಿ | ನದಿಯಿಂ |

| ∪∪∪ | – – | ∪∪∪ | –∪∪ |
|---|---|---|---|
| ಪರಮೆ | ಗೋದಾ | ವರಿಯ | ಮಧ್ಯದ |

| ∪∪∪ | –∪∪ | –∪ | – ∪ ∪ | –∪ | ∪ ∪ – | – |
|---|---|---|---|---|---|---|
| ಹರಹು | ಕನ್ನಡ | ದೇಶ | ವೆಂದನು | ಚಕ್ರಿ | ನೃಪತುಂ | ಗ |

ಇದರ ಉತ್ತರಾರ್ಧವು ಹೀಗೆಯೇ ಇರುತ್ತದೆ.

## ವಾರ್ಧಕ ಷಟ್ಪದಿ



೧. ೨. ೪ ಮತ್ತು ೫ನೆಯ ಸಾಲುಗಳಲ್ಲಿ ೫ ಮಾತ್ರೆಗಳ ೪ ಗಣಗಳಿರುತ್ತವೆ. ೩. ಮತ್ತು ೬ ನೆಯ ಸಾಲುಗಳಲ್ಲಿ ೫ ಮಾತ್ರೆಗಳ ೬ ಗಣಗಳು ಮತ್ತು ಒಂದು ಗುರು ನಿಯತವಾಗಿರುತ್ತದೆ.

**ಉದಾ :**

| ∪∪∪∪∪ | ∪∪∪∪∪ | – ∪ – | ∪∪∪∪∪ |
|---|---|---|---|
| ಬಿಸುಡದಿರು | ಬಿಸುಡದಿರು | ಬೇಡಬೇ | ಡಕಟಕಟ |
| ∪∪∪– | ∪∪ – ∪ | –∪∪∪ | –∪– |
| ಹಸುಳೆನೊಂ | ದಹನೆಂದು | ಬೀಳ್ವವವ | ನೆತ್ತಿತ |

| ∪ ∪ – ∪ | ∪∪∪ – | ∪∪ – ∪ | – ∪∪∪ | –∪∪∪ | –∪– | – |
|---|---|---|---|---|---|---|
| ಕ್ಕಿಸಿಕೊಂಡು | ಕುಲವನೋ | ಡದೆಬೇಡಿ | ಕೊಂಬೆನಿವ | ನೆನ್ನಮಗ | ನಲ್ಲನಿ | ನ್ನ |

ಇದರ ಉತ್ತರಾರ್ಧವು ಹೀಗೆಯೇ ಇರುತ್ತದೆ.

## ಭಾಷಾ ಚಟುವಟಿಕೆ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

೧. ಷಟ್ಪದಿ ಎಂದರೇನು? ವಿಧಗಳಾವುವು?

೨. ಭಾಮಿನಿ ಷಟ್ಪದಿಯ ಲಕ್ಷಣವೇನು?

೩. ವಾರ್ಧಕ ಷಟ್ಪದಿಯನ್ನು ವಿವರಿಸಿ.

## ಚಟುವಟಿಕೆ

**ಅ. ನಮೂದಿತ ಪದ್ಯಗಳನ್ನು ಕಂಠಪಾಠ ಮಾಡಿ.**

ಗರಳಗೊರಳವನರಳ __________ ______________

_______ ________ ________ ______ _______

______ _______ ________ ______ ___________

______ _________ ______ _________ _______

__________________ _____________ ________

______ ________ _______ ______ _____ ಮರಳಿ ಕಾನನಕೆಯ್ದಿತು ॥ ೪ ॥

* * *

ಎಲ್ಲಿ ನೋಡಲಿ __________

_____ ________ _______

_____ ______ ______ _____ ________।

_____ ______ ______

____ ______ _______ _______

_______ _______ ______ _____ ಭವ್ಯ ವಾಸ್ತುಗಳು ॥ ೩ ॥

## ಪೂರಕ ಓದು

- **ಎಚ್. ಸಿದ್ಧಲಿಂಗಯ್ಯ** ಅವರು ಗದ್ಯರೂಪಕ್ಕೆ ಅನುವಾದಿಸಿರುವ **ರಾಘವಾಂಕನ ಹರಿಶ್ಚಂದ್ರ ಚಾರಿತ್ರ** ಗ್ರಂಥವನ್ನು ಅವಲೋಕಿಸಿ.



# ಪೋಷಕ ಅಧ್ಯಯನ

## ಪೋಷಕ ಪಾಠ – ೦೧

## ಪ್ರಜಾನಿಷ್ಠೆ

**– ಸಾ. ಶಿ. ಮರುಳಯ್ಯ**

ಹೊಯ್ಸಳೇಶ್ವರ ಸಾಮ್ರಾಟ ವಿಷ್ಣುವರ್ಧನನು ದಂಡಯಾತ್ರೆಯಲ್ಲಿ ತಾನು ಗೆದ್ದ ತಲಕಾಡಿನಲ್ಲಿ ಶಾಂತಿ ಸ್ಥಾಪಿಸುವ ಸಲುವಾಗಿ ರಾಜಧಾನಿ ದ್ವಾರಸಮುದ್ರದಿಂದ ತೆರಳಿದ್ದ ಸಂದರ್ಭ. ಆ ಸಮಯದಲ್ಲಿ ಆತನ ಪಟ್ಟದರಸಿ ಶಾಂತಲಾದೇವಿ ಮತ್ತು ಯುವರಾಜಕುಮಾರ ಉದಯಾದಿತ್ಯರು ರಾಜಧಾನಿಯ ಸಂರಕ್ಷಕರಾಗಿ ನಿಂತರು.

ಈ ಸಂದರ್ಭದಲ್ಲಿ ಮಹಾರಾಣಿ ಗಂಡುಡುಗೆಯನ್ನುಟ್ಟು ಯುವರಾಜನೊಂದಿಗೆ ಸಾಮ್ರಾಜ್ಯದ ಕೆಲವಾರು ಭಾಗಗಳಲ್ಲಿ ಸಂಚರಿಸಿ ರಾಜ್ಯದ ಪರಿಸ್ಥಿತಿಯನ್ನು ತಿಳಿದುಕೊಂಡು ಬರುತ್ತಿದ್ದಳು. ಹೀಗೆ ಹೋದ ಒಂದು ಸಂದರ್ಭದಲ್ಲಿ ಒಮ್ಮೆ ಅವರಿಬ್ಬರೂ ದ್ವಾರಸಮುದ್ರದಿಂದ ಹೊರಟು ಹಲವು ಹಳ್ಳಿಗಳನ್ನು ದಾಟಿ ಬನದಮ್ಮನಹಳ್ಳಿ ಊರಿಗೆ ಬಂದರು. ಆ ಹಳ್ಳಿಯ ಹೊರಭಾಗದಲ್ಲಿದ್ದ ಬನಶಂಕರಿ ದೇವಾಲಯದ ಮುಂಭಾಗದ ಕಟ್ಟೆಯ ಹತ್ತಿರ ನೂರಾರು ಜನ ಸೇರಿದ್ದನ್ನು ಕಂಡರು. ಅಲ್ಲಿ ಏನೋ ಒಂದು ಹೊಸ ಬಗೆಯ ನ್ಯಾಯವನ್ನು ಬೇಡಲಾಗುತ್ತಿತ್ತು.

ಇಬ್ಬರೂ ಅಲ್ಲಿನ ಜನಸಮೂಹಕ್ಕೆ ಕಾಣದಂತೆ ದೂರದಲ್ಲಿ ಹಿಪ್ಪೇಮರದ ಮರೆಯಲ್ಲಿ ನಿಂತು ಅಲ್ಲಿ ನಡೆಯುತ್ತಿದ್ದುದ್ದನ್ನು ಆಲಿಸತೊಡಗಿದರು.

'ಏನ್ರಪ್ಪಾ...... ದೈವದವರು ಏನು ಹೇಳ್ತೀರಾ ಹೇಳ್ರೀ.......' ಗಾದಿಯ ಮೇಲೆ ಕುಳಿತಿದ್ದ ದಪ್ಪ ಮೀಸೆಯ ಗಾವುಂಡ ಕೇತುಮಲ್ಲ ನಾಯಕ ಕಟ್ಟೆಯ ಮೇಲೆ ಕುಳಿತಿದ್ದ ಹತ್ತು ಜನರನ್ನು ಕೇಳಿದ.

ಅಂದಿನ ಪಂಚಾಯ್ತಿಯಲ್ಲಿ ತೀರ್ಮಾನವಾಗಬೇಕಿದ್ದ ವಿಚಾರವೆಂದರೆ, ಎರಡು ವರ್ಷಗಳ ಹಿಂದೆ ಬೀರಣ್ಣ ಎಂಬಾತ ತನ್ನ ಹೊಲವನ್ನು ಈರಣ್ಣ ಎಂಬಾತನಿಗೆ ಎಂಟು ಹೊನ್ನಿಗೆ ಮಾರಿದ್ದ. ಕ್ರಯಕ್ಕೆ ತೆಗೆದುಕೊಂಡ ಹೊಲದಲ್ಲಿ ಉಳುಮೆ ಮಾಡುವಾಗ ಈರಣ್ಣನಿಗೆ ಒಂದು ಕೊಪ್ಪರಿಗೆ ಬಂಗಾರ ಸಿಕ್ಕಿತ್ತು. ಈರಣ್ಣ ಅದನ್ನು ಪೂಜೆ ಮಾಡಿ ಬೀರಣ್ಣನ್ನ ಮನೆಗೆ ತೆಗೆದುಕೊಂಡು ಹೋಗಿ ಅದನ್ನು ಅವನೇ ತೆಗೆದುಕೊಳ್ಳಬೇಕಾಗಿ ಕೇಳಿದ. ಆದರೆ ಬೀರಣ್ಣನು ತಾನು ಹೊಲ ಮಾರಿದ ಮೇಲೆ ಅದರ ಮೇಲೆ ತನಗೆ ಹಕ್ಕಿಲ್ಲವೆಂದೂ ಅದರಲ್ಲಿ ಸಿಕ್ಕಿದ್ದೆಲ್ಲವೂ ಹೊಲ ಕೊಂಡವನಿಗೇ ಸೇರಬೇಕೆಂದೂ ಹೇಳಿ ಹೊನ್ನನ್ನು ತೆಗೆದುಕೊಳ್ಳಲು ನಿರಾಕರಿಸಿದ.

ಅದಕ್ಕೆ ಈರಣ್ಣ ತಾನು ಹಣ ಕೊಟ್ಟಿದ್ದು ಮಣ್ಣಿಗೇ ಹೊರತು ಅದರಲ್ಲಿ ಸಿಕ್ಕೋ ಹೊನ್ನಿಗಲ್ಲ, ಅದು ಬೀರಣ್ಣನ ಪಿತ್ರಾರ್ಜಿತ ಆಸ್ತಿ, ಆದ್ದರಿಂದ ಅದು ತನಗೆ ಬೇಡವೆಂದ.

ಅದಕ್ಕೆ ಬೀರಣ್ಣ–

'ಅದೆಂಗಾದಾತು. . ? ತಂಬುಲ ಉಗದ ಮ್ಯಾಲೆ ಮತ್ತೆ ಎತ್ತಿ ಬಾಯೊಳಗಿಟ್ಟುಕ್ಕೊಳ್ಳೋ ಕೆಟ್ಟತನ ಬ್ಯಾಡಾ....ಹೊನ್ನು, ಹೊಲ ಕೊಂಡುಕೊಂಡ ಈರಣ್ಣಂದೇ. . .ಅವನು ತಗೊಳ್ಳೋ ಹಂಗ ಮಾಡಿ ಉಪಕಾರ ಮಾಡಬೇಕು ದೈವದವರು' ಎಂದು ಬೇಡಿದ.

ಕಟ್ಟೆಯ ಮೇಲಿದ್ದ ದೈವದವರಿಗೆ ಏನೂ ತೋಚಲಿಲ್ಲ. .ಕಡೆಗೆ ಮುಖ್ಯಸ್ಥನಾದ ಕೇತುಮಲ್ಲ ಹೇಳಿದ–

'ಹೋಗಲಿ ಬಿಡಿ. . . ಇಬ್ಬರಿಗೂ ಬ್ಯಾಡವಾದ ಹೊನ್ನು ರಾಜ್ಯದ ಬೊಕ್ಕಸಾ ಸೇರಲಿ' ಎಂದ.

ಕೂಡಲೇ ಮರದ ಮರೆಯಲ್ಲಿದ್ದ ಶಾಂತಲೆ ಮುಂದೆ ಬಂದು, 'ಕೂಡದು...... ಕೂಡದು.......' ಎಂದು ಕೂಗಿದಳು.

ಎಲ್ಲರೂ ಅತ್ತ ಕಣ್ಣು ಹಾಯಿಸಿದರು. ಇಬ್ಬರೂ ಪಂಚಾಯತಿಯ ಕಡೆಗೇ ಬರುತ್ತಿದ್ದುದು ಕಂಡಿತು. ಗಂಡುಡುಗೆಯಲ್ಲಿದ್ದ ಶಾಂತಲೆಯನ್ನು ಯಾರೂ ಗುರುತಿಸಲಿಲ್ಲ.

ಕೇತುಮಲ್ಲ ಕೇಳಿದ – "ನೀವು ಯಾರೇ ಆಗಿರಿ...... ಆದರೆ...... ನೀನು...... ಈ ಹೊನ್ನು ರಾಜ್ಯದ ಬೊಕ್ಕಸಕ್ಕೆ ಸೇರಬಾರದು ಅಂದೆಯಲ್ಲಾ ಯಾಕೆ?"

'ತಾತ ಅದು ಪ್ರಜೆಗಳ ಹೊನ್ನು.'

" ಹೌದು ಈ ಹೊನ್ನು ಪ್ರಜೆಗಳದು. . ಹಾಗಾದರೆ ಪ್ರಜೆಗಳು ಯಾರವರು. . .?" ಎಂದು ಪ್ರಶ್ನೆ ಹಾಕಿದ ಕೇತುಮಲ್ಲ. ಶಾಂತಲೆ ಉತ್ತರಿಸದಾದಳು.

ಕೇತಮಲ್ಲನೇ ಮುಂದುವರಿಸಿದ.__

"ಹೇಳು ನನ್ನಪ್ಪಾ . . ನಾವೆಲ್ಲಾ ಹೊಯ್ಸಳೇಶ್ವರರ ಮಕ್ಕಳಲ್ಲವೇನಪ್ಪಾ. . . . ಮಕ್ಕಳ ದುಡಿಮೆ ತಂದೆಯದಲ್ಲವೆ?"

'ಹೋಗಲಿ, ನಿಮ್ಮ ಊರಿನ ಹಣ ನಿಮ್ಮೂರಿನ ಏಳಿಗೆಗಾಗಿಯೇ ವಿನಿಯೋಗವಾಗಲಿ.'

'ಅಷ್ಟು ಸ್ವಾರ್ಥ ಯಾಕೋ ನನ್ನಪ್ಪ. . . ನಾರಾಯಣನಂತಹ ಮಹಾರಾಜರು, ಲಕ್ಷ್ಮೀಯಂತ ಮಹಾರಾಣಿ ಇರೋವಾಗ ನಮಗೆ ಹಣಕ್ಕೆ ಕೊರತೆಯೇ. . . ನಮ್ಮೂರಿಗೆ ಯಾವುದೂ ಈಗ ಬೇಡ. . . ನಾವು ಒಂದರ್ಥದಲ್ಲಿ ತೃಪ್ತರು. ಏನಾದರೂ ಊರಿಗೆ ಬೇಕಾದರೆ ನಾವೇ ಮಾಡಿಕೊಳ್ತೀವಿ. . .ಇದು ದೊರೆಯ ಹಣ, ಧರೆಯ ಕ್ಷೇಮಕ್ಕೆ ಮೀಸಲು.'

ಕೇತುಮಲ್ಲನ ಮಾತು ಕೇಳಿ,"ಅಣ್ಣಗಳಿರಾ ನಿಮ್ಮಂತಹ ಪುಣ್ಯವಂತ ಪ್ರಜೆಗಳನ್ನು ಪಡೆದ ರಾಜ ಅದೆಷ್ಟು ಭಾಗ್ಯವಂತನೋ. ." ಎಂದಳು ಶಾಂತಲೆ.

"ಇರಬಹುದು.. ಅಂಥಾ ರಾಜ ರಾಣಿಯರನ್ನು ಪಡೆದ ನಾವು ಪುಣ್ಯವಂತರು." ಅಂದ ಕೇತುಮಲ್ಲ.

ಆಗ ಉದಯಾದಿತ್ಯನಿಂದ ಗಂಡುಡುಗೆಯಲ್ಲಿದ್ದುದು ಶಾಂತಲೆ ಎಂಬ ವಿಷಯ ತಿಳಿದ ಜನರ ಸಂತೋಷಕ್ಕೆ ಪಾರವೇ ಇಲ್ಲವಾಯಿತು. ಅಲ್ಲಿ ನೆರೆದಿದ್ದ ಹೆಂಗೆಳೆಯರೆಲ್ಲಾ ರಾಣಿ ಶಾಂತಲೆಯನ್ನು ಮುಟ್ಟಿ

ಮಾತನಾಡಿಸಿ ಮುಕ್ತಿ ಪಡೆದಷ್ಟು ಸಂತುಷ್ಟರಾದರು. ಅವಳ ಪಾದಗಳನ್ನು ಮುಟ್ಟಿ ಮುಟ್ಟಿ ಕಣ್ಣುಗಳಿಗೆ ಒತ್ತಿಕೊಂಡರು. ಅವಳು ಹೆಜ್ಜೆ ಇಟ್ಟ ಸ್ಥಳದ ದೂಳನ್ನು ತೆಗೆದು ನೆತ್ತಿಯಲ್ಲಿ ಧರಿಸಿದರು. ಶಾಂತಲೆ ಎಷ್ಟು ತಡೆದರೂ ಅವರ ಭಕ್ತಿಯ ಪ್ರದರ್ಶನ ನಿಲ್ಲಲೇ ಇಲ್ಲ. ಕೊನೆಗೆ ಉದಯಾದಿತ್ಯ ಬಹು ಪ್ರಯಾಸದಿಂದ ಅವರನ್ನು ತಡೆಯಬೇಕಾಯಿತು. ಎಲ್ಲ ದೈವದವರೂ ಆ ಹೊನ್ನನ್ನು ಬೊಕ್ಕಸಕ್ಕೆಂದು ಒಪ್ಪಿಸಿಕೊಳ್ಳದ ಹೊರತು ಮಹಾರಾಣಿಯವರ ಮತ್ತು ಯುವರಾಜರ ಪಾದಗಳನ್ನು ಬಿಡುವುದಿಲ್ಲ ಎಂದು ಹಠ ಮಾಡಲು ಶಾಂತಲೆ ಅದು ದೈವದ ದುಡ್ಡಾದ ಕಾರಣ ಅದು ದೇವಕಾರ್ಯಕ್ಕೇ ವಿನಿಯೋಗವಾಗಬೇಕಾದ್ದು ಧರ್ಮವೆಂದೂ ಹೊಯ್ಸಳ ಶೈಲಿಯ ಮಾದರಿಯಾಗಿ ವೇಲಾಪುರಿಯಲ್ಲಿ ಹಾಗೂ ದ್ವಾರಸಮುದ್ರದಲ್ಲಿ ದೇವಾಲಯ ನಿರ್ಮಾಣಕ್ಕಾಗಿ ಆ ಹೊನ್ನು ವಿನಿಯೋಗವಾಗಲಿ ಎಂದೂ ದ್ವಾರಸಮುದ್ರದಲ್ಲಿ ನಿರ್ಮಾಣವಾಗುವ ಅವಳಿ ದೇವಾಲಯಗಳು ಕೇತುಮಲ್ಲ ನಾಯಕರ ಹೆಸರಿನಲ್ಲಿಯೇ ನಿರ್ಮಾಣವಾಗಬೇಕು ಮತ್ತು ಅವರ ಹೆಸರಿನಲ್ಲೇ ಒಂದು ಶಿಲಾ ಶಾಸನವನ್ನು ಸ್ಥಾಪಿಸಬೇಕೆಂದು ತೀರ್ಪಿತ್ತಳು.

ಕೇತುಮಲ್ಲನಾಯಕ ಏನೋ ಹೇಳಹೊರಟ, ಆದರೆ ಜನತೆ

"ಮಹಾತಾಯಿ ಹಾಗೆಯೇ ಆಗಲಿ. ಕೇತಮಲ್ಲಪ್ಪನ ಹೆಸರಿನಲ್ಲೇ ಕಟ್ಟೋಣವಾಗಲಿ." ಎಂದು ಒಕ್ಕೊರಲಿನಲ್ಲಿ ಕೂಗಿ ಜತೆಯಲ್ಲಿ

"ಕಟ್ಟುವ ದೇವಾಲಯಗಳು ಹೊಯ್ಸಳೇಶ್ವರ, ಶಾಂತಲೇಶ್ವರ ಎಂದಾಗಲಿ" ಎಂಬ ಕೂಗೂ ಕೇಳಿಸಿತು.

"ಹೌದು. ಹೊಯ್ಸಳೇಶ್ವರ ಶಾಂತಲೇಶ್ವರರಿಗೆ ಜಯವಾಗಲಿ"

ಎಂದಿತು ಬನದಮ್ಮನಹಳ್ಳಿಯ ಭಾಗ್ಯವಂತ ಜನತೆ.

ಅತ್ತಿಗೆ ಮೈದುನರು ತಮ್ಮ ತಮ್ಮ ಕುದುರೆಗಳನ್ನೇರಿ ಹೊರಟರು.

"ಮಹಾರಾಣಿಯವರಿಗೆ ಜಯವಾಗಲಿ."

"ಯುವರಾಜರಿಗೆ ಜಯವಾಗಲಿ. . ."

"ಹೊಯ್ಸಳೇಶ್ವರರಿಗೆ ಜಯವಾಗಲಿ. . ."

ಎಂದು ಹರ್ಷಘೋಷ ಮೂಡಿತು.



## ಅಭ್ಯಾಸ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ**

೧. ಹೊಯ್ಸಳೇಶ್ವರ ಸಾಮ್ರಾಟ ರಾಜಧಾನಿಯಿಂದ ಹೊರ ಹೊರಡಲು ಕಾರಣವೇನು?

೨. ಸಾಮ್ರಾಟ ರಾಜಧಾನಿಯಲ್ಲಿಲ್ಲದಿದ್ದಾಗ ರಾಜಧಾನಿಯ ಸಂರಕ್ಷಕರಾಗಿ ನಿಂತವರು ಯಾರು?

೩. ರಾಣಿ ರಾಜ್ಯದಲ್ಲಿ ವೇಷ ಮರೆಸಿಕೊಂಡು ಸಂಚರಿಸಲು ಕಾರಣವೇನು?

೪. ಬನದಮ್ಮನಹಳ್ಳಿಯ ದೇವಾಲಯದ ಮುಂದೆ ಯಾವ ವಿಚಾರವಾಗಿ ಚರ್ಚೆ ನಡೆದಿತ್ತು?

೫. ದೈವದವರ ತೀರ್ಪಿನ ಕುರಿತು ಶಾಂತಲೆಯ ಅಭಿಪ್ರಾಯವೇನು?

೬. ಶಾಂತಲೆ ನೀಡಿದ ತೀರ್ಪೇನು?

ಪೋಷಕ ಪಾಠ – ೦೨

# ಭೂಮಿಗಿಳಿದ ಬೃಹಸ್ಪತಿ

(ಶೇಕ್ಸ್‌ಪಿಯರನ 'ಮರ್ಚೆಂಟ್ ಆಫ್ ವೆನಿಸ್' ನಾಟಕದ ರೂಪಾಂತರ)

– ಕಾರ್ಕಡ ರಾಮಚಂದ್ರ ಉಡುಪ

ಹಿನ್ನೆಲೆ : ಕುಶನಗರದಲ್ಲಿ ಬಡ್ಡಿ ವ್ಯವಹಾರ ಮಾಡಿಕೊಂಡಿರುವ ಚಮನ್‌ಲಾಲ್ ಅತ್ಯಂತ ಜಿಪುಣನಾಗಿದ್ದು ಸಾಲಪಡೆದುಕೊಂಡವರನ್ನು ವಂಚಿಸಿ ಮೋಸ ಮಾಡುತ್ತಿದ್ದ. ಅದೇ ಊರಿನಲ್ಲಿ ರಾಜಕುಮಾರ್‌ನೆಂಬ ವರ್ತಕನಿದ್ದ. ಈತ ಅತ್ಯಂತ ಪ್ರಾಮಾಣಿಕ ಹಾಗೂ ಪರೋಪಕಾರಿಯಾಗಿದ್ದು ಜನಾನುರಾಗಿಯಾಗಿದ್ದ. ಇದರಿಂದಾಗಿ ಚಮನ್‌ಲಾಲನಿಗೆ ರಾಜಕುಮಾರನ ಬಗ್ಗೆ ಅಸಮಾಧಾನವಿತ್ತು. ಒಮ್ಮೆ ಈ ರಾಜಕುಮಾರನ ಹಡಗು ಸಮುದ್ರದಲ್ಲಿ ಮುಳುಗಿ ಹೋಗಿ ಅಪಾರ ನಷ್ಟಕ್ಕೆ ಗುರಿಯಾಗುತ್ತಾನೆ. ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದ ರಾಜಕುಮಾರ್ ಚಮನ್‌ಲಾಲನ ಬಳಿ ಐದು ಸಾವಿರ ವರಹಗಳನ್ನು ಸಾಲರೂಪದಲ್ಲಿ ಪಡೆದುಕೊಳ್ಳುತ್ತಾನೆ. ಚಮನ್ ಲಾಲನಿಗೆ ಬರೆದುಕೊಟ್ಟ ಕರಾರು ಪತ್ರದಲ್ಲಿ ಮೂರು ತಿಂಗಳೊಳಗೆ ಸಾಲವನ್ನು ಮರುಪಾವತಿ ಮಾಡುವುದಾಗಿಯೂ ತಪ್ಪಿದಲ್ಲಿ ತನ್ನ ಎದೆಯ ಭಾಗದಲ್ಲಿ ಹೃದಯದ ಸಮೀಪದಿಂದ ಒಂದು ಸೇರು ಮಾಂಸವನ್ನು ಚಮನ್‌ಲಾಲ್ ಕತ್ತರಿಸಿಕೊಳ್ಳಬಹುದೆಂದೂ ನಮೂದಿಸಿರುತ್ತಾನೆ. ಗ್ರಹಚಾರವಶಾತ್ ರಾಜಕುಮಾರ್‌ನಿಗೆ ಕ್ಲಪ್ತ ಸಮಯದಲ್ಲಿ ಸಾಲ ತೀರಿಸಲು ಸಾಧ್ಯವಾಗುವುದಿಲ್ಲ. ಮೊದಲೇ ರಾಜಕುಮಾರ್‌ನ ಬಗ್ಗೆ ಅಸಮಾಧಾನ ಹೊಂದಿದ್ದ ಚಮನ್‌ಲಾಲ್ ಇದನ್ನೇ ನೆಪ ಮಾಡಿಕೊಂಡು ರಾಜಕುಮಾರ್ ವಿರುದ್ಧ ಕುಶನಗರದ ರಾಜನಲ್ಲಿ ದೂರು ಕೊಡುತ್ತಾನೆ. ಪರಿಣಾಮವೇನಾಯ್ತು ಎಂಬುದನ್ನು ಈ ನಾಟಕ ಭಾಗದಲ್ಲಿ ನೋಡಬಹುದು.



**ಪಾತ್ರ ಪರಿಚಯ**

ರಾಜ – ಕುಶನಗರದ ಮಹಾರಾಜ

ಚಮನ್‌ಲಾಲ್ – ಬಡ್ಡಿ ವ್ಯವಹಾರ ಮಾಡುತ್ತಿರುವ ಜಿಪುಣಾಗ್ರೇಸರ

ರಾಜಕುಮಾರ್ – ವೃತ್ತಿಯಿಂದ ವರ್ತಕನಾಗಿದ್ದು ದೀನ ದುರ್ಬಲರಿಗೆ ಉಪಕಾರ ಮಾಡುವುದರಲ್ಲೇ ತೃಪ್ತಿ ಕಂಡವನು

ವಸುಮಿತ್ರ – ಗೊದ್ವಾಲ ಸಂಸ್ಥಾನದ ವಿದ್ವಾಂಸ

ಮದನ – ರಾಜಕುಮಾರ್‌ನ ಸ್ನೇಹಿತ (ಮಾರು ವೇಷದಲ್ಲಿರವ ಭ್ರಮರಾಂಬೆ)

ಸೇವಕ – ಕುಶನಗರದ ರಾಜನ ಸೇವಕ (ಮಾರು ವೇಷದಲ್ಲಿರುವ ಚಂಪಕಮಾಲಿನಿ)

ನಾಗರಿಕರು – ಕುಶನಗರದ ನಾಗರಿಕರು

(ಪರದೆ ಮೇಲೇಳುತ್ತಿರುವಂತೆಯೇ)
[ಕುಶನಗರದ ರಾಜನ ದರ್ಬಾರು]

**ರಾಜ** : ಸಾಧ್ಯವಿಲ್ಲ. ಒಬ್ಬ ವ್ಯಕ್ತಿಯನ್ನುಳಿಸುವುದಕ್ಕಾಗಿ, ಪರಂಪರಾಗತವಾಗಿ ಬಂದಿರುವ ಕಾನೂನಿನ ವಿಧಿಗಳನ್ನು ಕೈಬಿಡವುದು ಸಾಧ್ಯವಿಲ್ಲ. ನನ್ನ ರಾಜ್ಯದಲ್ಲಿ ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು.

**ಚಮನ್** : ಸರಿಯಾದ ಮಾತು. ಸಾರ್ವಭೌಮರು ಚಿರಾಯುಗಳಾಗಲಿ.

**ನಾಗರಿಕರು** : ಕೂಡದು. ಮಹಾರಾಜರು ಅದಕ್ಕೆಡೆಕೊಡಕೂಡದು. ಪ್ರಜೆಗಳೆಲ್ಲರ ಒಕ್ಕೊರಲಿನ ಪ್ರಾರ್ಥನೆಯಿದು.

**ರಾಜ** : ಸಾವಧಾನ! ಈ ಮಾತನ್ನು ಕೇಳಲು ಕುಶನಗರದ ರಾಜರು ತಯಾರಿಲ್ಲ.

**ಚಮನ್** : (ಕತ್ತಿ ಝಳಪಿಸುತ್ತಾ) ಹಾಗಾದರೆ ತಡವೇಕೆ ನಿಮ್ಮಪ್ಪಣೆಗಾಗಿ ಕಾಯುತ್ತಿದ್ದೇನೆ. ತೀರ್ಮಾನವನ್ನು ಸಾರಿಬಿಡಿರಿ.

**ರಾಜಕುಮಾರ್** : ನಾನು ತಯಾರಿದ್ದೇನೆ. ತೀರಿಸಿಕೋ ನಿನ್ನ ಸೇಡು. ನನ್ನ ದೇಹದ ಒಂದು ಮುದ್ದೆ ಮಾಂಸದಿಂದ ಈ ರಾಜ್ಯದ ಸಂಸ್ಕೃತಿ, ಕೀರ್ತಿ ವಿದೇಶಗಳಲ್ಲಿ ಪ್ರಶಂಸಿಸಲ್ಪಡುವುದಾದರೆ ನಾನು ಬದುಕಿದ್ದು ಸಾರ್ಥಕವಾಯಿತು.

**ರಾಜ** : ಹಾಂ ತಡೆ ಸಾಹುಕಾರ. ನಮ್ಮ ಆಪ್ತಮಿತ್ರ ಗೋದ್ವಾಲ ಸಂಸ್ಥಾನದ ಮಹಾರಾಜರ ಆಸ್ಥಾನದಲ್ಲಿರುವ ನ್ಯಾಯ ನಿರ್ಣಯ ವಿಶಾರದರಾದ ಪತಾಂಜಲಿಯವರ ಸೇವೆಯನ್ನು ಎರವಲಾಗಿ ಕೇಳಿರುವೆವು. ಸ್ವಲ್ಪ ಕಾಯೋಣ.

**ಚಮನ್** : ಮೂರು ತಿಂಗಳೊಳಗಾಗಿ ಹಿಂದಿರುಗಿಸದಿದ್ದರೆ ಹೃದಯದ ಹತ್ತಿರದಿಂದ ಎದೆಯ ಒಂದು ಸೇರು ಮಾಂಸವನ್ನು ಕಿತ್ತುಕೊಳ್ಳುವ ಹಕ್ಕನ್ನು ಕರಾರುಪತ್ರ ಕೊಟ್ಟಿದೆ ನನಗೆ. ಪತ್ರವು ಸನ್ನಿಧಾನದಲ್ಲಿದೆ. ಪತ್ರ ಬರೆದುಕೊಟ್ಟವರಾಗಲೀ ಸಾಕ್ಷಿಯಾಗಲೀ ಅದನ್ನು ನಿರಾಕರಿಸಿಲ್ಲ. ಇನ್ನೇಕೆ ಇದಕ್ಕೆ ಹೊರಗಿನವರು?.

**ರಾಜ** : ನಿನಗೆ ನ್ಯಾಯ ದೊರತೇ ದೊರೆಯುವುದು. ಕಾನೂನಿನ ದೃಷ್ಟಿಯಲ್ಲಿ ನೀವಿಬ್ಬರೂ ಸರಿಸಮಾನರು. ನಿನಗೆ ಕೊಲ್ಲುವ ಹಕ್ಕಿದ್ದರೆ ಆರೋಪಿಗೆ ರಕ್ಷಿಸಿಕೊಳ್ಳುವ ಹಕ್ಕೂ ಇದೆ.

**ಸೇವಕ** : ಮಹಾರಾಜರಿಗೆ ಜಯವಾಗಲಿ. ಗೋದ್ವಾಲ ಸಂಸ್ಥಾನದಿಂದ ವಿದ್ವಾಂಸರೂ ಅವರ ಸಹಾಯಕರೂ ಆಸ್ಥಾನ ಪ್ರವೇಶಕ್ಕೆ ಅಪ್ಪಣೆಯನ್ನು ಕಾಯುತ್ತಿರುವರು.

**ರಾಜ** : ಒಳ್ಳೇದು, ಬರ ಮಾಡು (ಸೇವಕ ವಂದಿಸಿ ಹೋಗುತ್ತಾನೆ. ಸಭೆಯಲ್ಲಿ ಗುಜುಗುಜು ಪ್ರಾರಂಭವಾಗುವುದು. ವೇಷಪಲ್ಲಟಗೊಂಡ ಭ್ರಮರಾಂಭೆ ಮತ್ತು ಚಂಪಕಮಾಲಿನಿ ಪ್ರವೇಶಿಸಿ).

**ವಸುಮಿತ್ರ** : ಮಹಾರಾಜರಿಗೆ ನಮ್ಮ ಸಾಷ್ಟಾಂಗ ನಮಸ್ಕಾರಗಳು
(ಇಬ್ಬರೂ ಮಂಡಿಯೂರಿ ವಂದಿಸುವರು).

**ರಾಜ** : ಯುವಕರೇ, ನೀವಾರು? ಏಕೆ ಬಂದಿರಿ? ನಾವು ನ್ಯಾಯತಜ್ಞ ಪತಾಂಜಲಿಯವರನ್ನು ನಿರೀಕ್ಷಿಸಿದ್ದೆವು.

**ವಸುಮಿತ್ರ** : ಪತಾಂಜಲಿಯವರು ಅನಾರೋಗ್ಯದ ಕಾರಣದಿಂದ ಬರಲಾರದಾಗಿದ್ದು ನಮ್ಮನ್ನು ಈ ಪತ್ರದೊಡನೆ ಕಳುಹಿಸಿರುವರು. ಪರಾಂಬರಿಸೋಣವಾಗಲಿ

(ಪತ್ರವನ್ನು ಕೊಡುವನು).

**ರಾಜ** : (ತನ್ನಲಿಯೇ ಓದಿ)ನಿಮ್ಮ ಎಳೆಯ ಪ್ರಾಯವನ್ನು ಗಮನಿಸಿ, ನಾವು ಸ್ವಲ್ಪ ಅನುಮಾನಿಸಿದ್ದೆವು.

**ವಸುಮಿತ್ರ** : ನಾವು ಈ ವಿಚಾರಣೆಯನ್ನು ಕೈಗೆತ್ತಿಕೊಳ್ಳುವುದನ್ನು ದ್ವಿಪಕ್ಷದವರೂ ಸಮ್ಮತಿಸುವಿರಷ್ಟೆ!.

**ರಾಜಕುಮಾರ್** : ನನಗೆ ತಮ್ಮಲ್ಲಿ ವಿಶ್ವಾಸವಿದೆ. ತಮ್ಮ ವಿದ್ವತ್ತಿನಲ್ಲಿ ನಂಬುಗೆ ಇದೆ.

**ಚಮನ್** : ನನಗಂತೂ ಈ ಹಗರಣ ಬೇಗ ಮುಗಿಯಬೇಕು. ನನ್ನ ತಾಳ್ಮೆ ಮೇರೆ ಮೀರುತ್ತಿದೆ. ನ್ಯಾಯವಿಚಾರಣೆಗೆ ನನ್ನ ಸಮ್ಮತಿಯಿದೆ.

**ವಸುಮಿತ್ರ** : ಆಸ್ಥಾನದ ಮುಂದಿರುವ ವಿವಾದವನ್ನು ನಾನೂ ನನ್ನ ಗುರುಗಳೂ ಕೂಡಿಯೇ ಮೂರುದಿನಗಳ ಪರ್ಯಂತ ಅಭ್ಯಾಸ ಮಾಡಿರುವೆವು. ಕುಶನಗರದ ಕಾನೂನು ಕಟ್ಟಲೆಗಳನ್ನೂ ತಿಳಿದುಕೊಂಡೆವು. ನಾನೊಮ್ಮೆ ಕರಾರು ಪತ್ರವನ್ನು ನೋಡಬಹುದೇ?

**ಚಮನ್** : ಒಳ್ಳೇದು

**ವಸುಮಿತ್ರ** : (ರಾಜನಲ್ಲಿಗೆ ತೆರಳಿ ಕರಾರುಪತ್ರವನ್ನು ಪರೀಕ್ಷಿಸಿ) ವರ್ತಕರೇ (ರಾಜಕುಮಾರ್‌ನಿಗೆ) ಈ ಪತ್ರದಲ್ಲಿ ನಮೂದಿಸಿದ ಮೂರು ತಿಂಗಳು ಕಳೆಯುವುದರೊಳಗಾಗಿ ಹಣ ಮತ್ತು ಬಡ್ಡಿಯನ್ನು ವಾಪಸ್ಸುಕೊಟ್ಟಿರೇನು?

**ರಾಜಕುಮಾರ್** : ವಿಶಿಷ್ಟ ಕಾರಣಗಳಿಂದಾಗಿ ಅದು ಸಾಧ್ಯವಾಗಿಲ್ಲ.

**ವಸುಮಿತ್ರ** : ಕಾರಣವೇನೇ ಇರಲಿ, ಕರಾರು ಮುರಿಯಲ್ಪಟ್ಟಿದೆ. ಕುಶನಗರದ ಕಾನೂನಿನಂತೆ ತಪ್ಪುದಂಡಕ್ಕೆ ನೀವು ಅರ್ಹರಾಗಿದ್ದೀರಿ.

**ಚಮನ್** : ವ್ಹಾರೆ ವ್ಹಾ! ಭೂಮಿಗಿಳಿದು ಬಂದ ಬೃಹಸ್ಪತಿ. ಸಾಕ್ಷಾತ್ ಬೃಹಸ್ಪತಿ.!

**ವಸುಮಿತ್ರ** : ವರ್ತಕರೇ ತಮಗೇನಾದರೂ ಹೇಳಿಕೊಳ್ಳುವುದಿದೆಯೇ?

**ರಾಜಕುಮಾರ್** : ನಾನು ಸಂಪಾದಿಸಿದ ಸಂಪತ್ತನ್ನು ದೀನದಲಿತರ ಕಣ್ಣೀರನ್ನು ಒರೆಸುವುದಕ್ಕಾಗಿ, ನನ್ನ ಸ್ನೇಹಿತರಿಗಾಗಿ ವ್ಯಯಿಸಿರುವೆನು. ಈ ದೇಶದ ನ್ಯಾಯ ಪರಿಪಾಲನೆಗಾಗಿ ನನ್ನ ಬಲಿದಾನವಾಗುತ್ತಿದ್ದರೆ, ನಾನು ಧನ್ಯನೆಂದು ತಿಳಿದುಕೊಳ್ಳುವೆನು.

**ವಸುಮಿತ್ರ** : ಸಾಹುಕಾರರೇ, ನಿಮಗೆ ಕಾನೂನುಕ್ರಮಕ್ಕನುಸಾರವಾಗಿ ರಾಜಕುಮಾರರ ಹೃದಯದ ಸಮೀಪದಿಂದ ಎದೆಯ ಒಂದು ಸೇರು ಮಾಂಸವನ್ನು ತೆಗೆಯುವ ಹಕ್ಕನ್ನು ಮಂಜೂರು ಮಾಡಲಾಗಿದೆ. ತೆಗೆಯಲು ಸನ್ನದ್ಧರಾಗಿದ್ದೀರಾ?

ಚಮನ್ : ಸನ್ನದ್ಧನಾಗಿದ್ದೇನೆ (ಚೂರಿ ತೋರಿಸುವನು).

ವಸುಮಿತ್ರ : ಹಾಂ. ಸಾವಧಾನ, ನೀವು ತ್ರಾಸುಪಡಿಗಳನ್ನು ಏರ್ಪಾಡು ಮಾಡಿರುವಿರೇ? ನಿಮ್ಮ ವೈದ್ಯರೆಲ್ಲಿ?

ಚಮನ್ : ಏಕೆ ವೈದ್ಯರು ? ತ್ರಾಸಿನ ಅಗತ್ಯವೇನು?

ವಸುಮಿತ್ರ : ಕರಾರು ಪತ್ರದಲ್ಲಿ ನಮೂದಿಸಿರುವುದು ಒಂದು ಸೇರು ಮಾಂಸವಷ್ಟೇ? ಹೆಚ್ಚಾಗಲೂ ಬಾರದು. ಕಡಿಮೆಯಾದರೂ ನ್ಯಾಯಬಾಹಿರವಾಗುತ್ತದೆ. ಅದಕ್ಕೇ ತಕ್ಕಡಿ.

ನಾಗರಿಕ : ಕೇಳು ಮಾರ್ವಾಡಿ, ಕೇಳು.

ವಸುಮಿತ್ರ : ಸದ್ದು. ನ್ಯಾಯಾಲಯದ ಗಾಂಭೀರ್ಯಕ್ಕೆ ಭಂಗ ತರಬೇಡಿರಿ. ಕೇಳು ಚಮನ್, ತಕ್ಕಡಿ, ತೂಕದ ಕಲ್ಲುಗಳ ವ್ಯವಸ್ಥೆಯನ್ನು ನ್ಯಾಯಾಲಯ ಮಾಡಬಲ್ಲದು. ಆದರೆ ಯೋಗ್ಯರಾದ ವೈದ್ಯರನ್ನು ನೀನೇ ಕರೆತರಬೇಕು.

ಚಮನ್ : ಏಕೆ...............ಏ.......ಏ......ಏಕೆ?

ವಸುಮಿತ್ರ : ಏಕೆಂದರೆ ಮಾಂಸವನ್ನು ತೆಗೆಯುವಾಗ ರಕ್ತಸ್ರಾವವಾಗದಂತೆ ನೋಡಿಕೊಳ್ಳಬೇಕಲ್ಲ!.

ನಾಗರೀಕ : ಕೇಳಿರಿ, ಕೇಳಿರಿ!

ವಸುಮಿತ್ರ : ಏನದು ಸದ್ದು? ..........ಮಾರ್ವಾಡಿಗಳೇ, ವೈದ್ಯರನ್ನು ತರುವುದು ಅಸಾಧ್ಯವಾದರೆ ನ್ಯಾಯಾಲಯದ್ದೇನೂ ತಕರಾರಿಲ್ಲ. ಆದರೆ ಒಂದು ತೊಟ್ಟು ರಕ್ತ ಹೊರಬರದಂತೆ ಸರಿಯಾಗಿ ಒಂದು ಸೇರು ಮಾಂಸವನ್ನು ತೆಗೆಯಬಹುದು. ಹೂಂ, ಬೇಗ...........

ನಾಗರಿಕರು : ಶಹಭಾಸ್, ಕೇಳಿರಿ ಭೂಮಿಗಿಳಿದು ಬಂದ ಬೃಹಸ್ಪತಿ. ಸಾಕ್ಷಾತ್ ಬೃಹಸ್ಪತಿ.

ಚಮನ್ : ......ಹಾ.....ಹಾ......ಗೇನೂ ಕರಾರು ಪತ್ರದಲ್ಲಿ ನಮೂದಿಸಿಲ್ಲ. ರಕ್ತಸ್ರಾವವಾದರೆ ಅದಕ್ಕೆ ನಾನು ಜವಾಬುದಾರನಲ್ಲ.

ವಸುಮಿತ್ರ : ಕಾನೂನು ಎಲ್ಲರಿಗೂ ಸಮಾನ. ರಕ್ತದ ಒಂದು ಬಿಂದುವನ್ನು ತೆಗೆಯುವ ಹಕ್ಕನ್ನೂ ಕರಾರು ಪತ್ರದಲ್ಲಿ ನಮೂದಿಸಿಲ್ಲ. ಒಂದು ತೊಟ್ಟು ರಕ್ತವನ್ನು ಹೊರತೆಗೆದರೂ ಕುಶನಗರದ ಕಾನೂನಿನ '೧೯೮'ನೆಯ ವಿಧಿಪ್ರಕಾರ ವಿನಾಕಾರಣ ನಾಗರಿಕನೊಬ್ಬನ ರಕ್ತ ಚೆಲ್ಲಿದುದಕ್ಕಾಗಿ ನೀನು ಮರಣದಂಡನೆಗೆ ಗುರಿಯಾಗುವಿ.

ಹೂಂ, ಬೇಗ.

ನಾಗರಿಕರು : ವಸುಮಿತ್ರರಿಗೆ ಜಯವಾಗಲಿ!

ರಾಜ : ಪ್ರಜಾ ಜನರೇ, ನಿಮಗಾದ ಸಂತೋಷದಲ್ಲಿ ನಾವೂ ಭಾಗಿಗಳು. ಆದರೆ ಆಸ್ಥಾನದ ಗಾಂಭೀರ್ಯವನ್ನು ಕಾಪಾಡುವುದು ನಿಮ್ಮೆಲ್ಲರ ಕರ್ತವ್ಯ. ನೆನಪಿರಲಿ.

ಚಮನ್ : ನನ್ನ ತಲೆ ಸಿಡಿಯುತ್ತಿದೆ. ನನ್ನನ್ನು ಹೋಗಲು ಬಿಡಿರಿ. ನಮಗೆ ಮಾಂಸ ಬೇಕಾಗಿಲ್ಲ. ನನ್ನ ಹಣವನ್ನು ಹಿಂದಿರುಗಿಸಿರಿ ಸಾಕು.

**ವಸುಮಿತ್ರ** : ಸಾಧ್ಯವಿಲ್ಲ. ಕರಾರುಪತ್ರದಲ್ಲಿ ಹಾಗೆ ನಮೂದಿಸಿಲ್ಲ. ವಾಯ್ದೆ ಕಳೆದ ಅನಂತರ ಹಣ ಸ್ವೀಕರಿಸಲು ಅವನು ಅರ್ಹನಲ್ಲ.

**ಚಮನ್** : (ತಲೆಯನ್ನು ಎರಡೂ ಕೈಗಳಿಂದ ಒತ್ತಿ ಹಿಡಿದುಕೊಂಡು) ನನ್ನ ತಲೆ ಸಿಡಿದು ಚೂರಾಗುತ್ತಿದೆ. ನನಗೆ ನಿಮ್ಮ ಹಣವೂ ಬೇಡ. ನಾನಿನ್ನು ಹೋಗುತ್ತೇನೆ (ಹೊರಡಲು ಸಿದ್ಧನಾಗುತ್ತಾನೆ).

**ವಸುಮಿತ್ರ** : ಹಾಂ. ಹಾಂ. ಅಷ್ಟು ಸುಲಭವಾಗಿ ಹೋಗುವಂತಿಲ್ಲ. ನಿಲ್ಲು ದುರುದ್ದೇಶದಿಂದ ಕುಶನಗರದ ಸತ್ಪ್ರಜೆಯೊಬ್ಬನ ಜೀವವನ್ನು ಕೊನೆಗಾಣಿಸಲು ನೀನು ಹೊಂಚು ಹಾಕಿರುವ ಸಂಗತಿ, ನ್ಯಾಯಾಸ್ಥಾನದಲ್ಲೀಗ ರುಜುವಾತಾಗಿದೆ. ಇದಕ್ಕೆ ನ್ಯಾಯಾಂಗದ ೨೫೬ನೆಯ ವಿಧಿ ಪ್ರಕಾರ ಆಜೀವ ಕಾರಾಗೃಹ ಮತ್ತು ನಿನ್ನ ಎಲ್ಲಾ ಚರ ಸ್ಥಿರ ಸ್ವತ್ತುಗಳು ಮುಟ್ಟುಗೋಲು (ಚಮನ್ ತಲೆಯನ್ನು ಕೈಗಳಲ್ಲಿ ಹಿಡಿದು ಕುಳಿತು ಬಿಡುವನು). ಆದರೆ ಮಹಾರಾಜರ ಕರುಣೆಗಾಗಿ ಪ್ರಾರ್ಥಿಸಿಕೊಂಡಲ್ಲಿ ಶಿಕ್ಷೆಯನ್ನು ಕಡಿಮೆ ಮಾಡಬಹುದು.

**ರಾಜ** : 'ನನಗ್ಯಾರ ಕರುಣೆಯ ಅಗತ್ಯವಿಲ್ಲೆಂದು' ಸಾರಿ ಹೇಳಿರುವನು. ಆದರೂ ನಮ್ಮ ರಾಜ್ಯದ ಸಂಸ್ಕೃತಿಯ ಮೇಲ್ಮೆಯನ್ನು ತೋರಿಸುವುದಕ್ಕಾಗಿ ನೀನು ಯಾಚಿಸುವ ಮೊದಲೇ ನಾವು ನಿನಗೆ ಕರುಣೆದೋರುವೆವು........ಆದರೆ ನಿನ್ನ ಎಲ್ಲಾ ಸ್ಥಿರ ಚರಾಸ್ತಿಯನ್ನು ಸ್ವಾಧಿನಪಡಿಸಿಕೊಂಡು, ವರ್ತಕ ರಾಜಕುಮಾರರಿಗೆ ಕೊಡಲಾಗುವುದು. ನೀನಿನ್ನು ಹೋಗಬಹುದು.

**ಚಮನ್** : ಅಯ್ಯೋ ಏನಾಗಿ ಹೋಯಿತು!! (ವೇಗವಾಗಿ ಹೋಗುತ್ತಾನೆ)

**ನಾಗರಿಕರು** : ಧಿಕ್ಕಾರ! ಧನಪಿಶಾಚಿಗೆ ಧಿಕ್ಕಾರ!!(ಮೂರುಸಲ ಕೂಗುವರು)



## ಅಭ್ಯಾಸ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ**

೧. ಪರದೆ ಮೇಲೇಳುತ್ತಿದ್ದಂತೆ ರಾಜ ಹೇಳಿದುದು ಏನು?

೨. ಕರಾರು ಪತ್ರದ ಸಾರಾಂಶವೇನು?

೩. ವಸುಮಿತ್ರನು ವೈದ್ಯರು ಹಾಗೂ ತ್ರಾಸು ಏಕೆ ಅಗತ್ಯವೆಂದು ಹೇಳಿದ?

೪. ಕುಶನಗರದ ಕಾನೂನಿನ ೧೯೮ನೆಯ ವಿಧಿ ಏನು ಹೇಳುತ್ತದೆ?

೫. ಪ್ರಸ್ತುತ ನಾಟಕದ ಸಾರಾಂಶವನ್ನು ಸಂಕ್ಷಿಪ್ತವಾಗಿ ಬರೆಯಿರಿ

## ಪೋಷಕ ಪಾಠ – ೦೩

# ಪ್ರಜ್ಞಾಪತಿ

### ಭಾವಗೀತೆ

– ಬಿ. ಎ. ಸನದಿ

ಸೋರುತಿದೆ ನನ್ನ ಮನೆ
ಹೆಂಚು ಹೊದಿಸುವರಿಲ್ಲ
ಆರುತಿದೆ ನನ್ನ ಒಲೆ
ಕೊಳು ಕುದಿಸುವರಿಲ್ಲ
ನಾ ಹಸಿದು ಬಂದಾಗ
ನೀಡಿ ತಣಿಸುವರಿಲ್ಲ
ಅಂಗಳದ ಗಿಡ–ಮರಕೆ
ನೀರು ಹಣಿಸುವರಿಲ್ಲ
ಬರುವ ಮಳೆ ಬಾರದಿರೆ
ಬಾವಿಯೂ ಬತ್ತುವುದು
ಆಳ ತೋಡುವರಿಲ್ಲ
ನೀರಡಿಸಿ ನಿಂದವರ
ಹೊರಳಿ ನೋಡುವರಿಲ್ಲ
ನೋಡಿ ಹಾಡುವರಿಲ್ಲ
ಹಾಡಿ ಹರಸುವರಿಲ್ಲ
ಇಲ್ಲವೆಂಬುವರಿಲ್ಲ
ಅಹುದು ಎಂಬುವರಿಲ್ಲ
ಯಾರಿಗಾರೂ ಇಲ್ಲ......

ಈ ಇಲ್ಲಗಳ ನೆನೆದು ಬಿಸಿಯುಸಿರು ಬಿಡುವವರೆ
ಹೊರನೆರವಿನಾಸರದ ಮೇಳಾಸೆಯಿಡುವವರೆ
ಇಳಿದು ನೋಡಿದಿರೇನು ನಿಮ್ಮ ಅಂತರಾಳದಲಿ
ನಿಮ್ಮ ನೀವರಿಯದಿಹ ಅಜ್ಞಾತ ಲೋಕದಲಿ
ಕಾದು ಕುಳಿತಿಹನೊಬ್ಬ ಬಲಶಾಲಿ ಪ್ರಜ್ಞಾಪತಿ
ಅಮೃತ – ಬಳ್ಳಿಯ ಬದಲು ಬೆಟ್ಟವನೆ ತರುವನಾ ಮಾರುತಿ!

## ಅಭ್ಯಾಸ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ**

೧. ಕವಿ ಸೋರುತಿಹುದು ಯಾವುದು ಎಂದಿರುವರು?

೨. ನೀರನ್ನು ಯಾವುದಕ್ಕೆ ಹಣಿಸುವವರು ಇಲ್ಲವೆಂದು ಕವಿ ಹೇಳಿದ್ದಾರೆ?

೩. ಅಜ್ಞಾತ ಲೋಕದಲ್ಲಿ ಕಾದು ಕುಳಿತಿರುವವರು ಯಾರು?

೪. ಮಾರುತಿ ಅಮೃತಬಳ್ಳಿಯ ಬದಲು ಏನನ್ನು ತರುವನು?

೫. ಕವಿ ಯಾವುದರಲ್ಲಿ ಇಳಿದು ನೋಡಬೇಕೆಂದು ಹೇಳಿದ್ದಾರೆ?

೬. ಕವಿ ಯಾರು ಯಾರನ್ನು ಇಲ್ಲವೆಂದು ಹೇಳಿದ್ದಾರೆ?



## ಪೋಷಕ ಪಾಠ – ೦೪

# ಮಹಿಳೆ ಮತ್ತು ಶಿಕ್ಷಣ

– ಸಬಿಹಾ ಭೂಮೀಗೌಡ

ಕಾಲ ಬದಲಾದಂತೆ ಮೌಲ್ಯಗಳೂ ಬದಲಾಗುವವು. ಆಧುನಿಕ ಶಿಕ್ಷಣ ಇಂದು ಹೆಣ್ಣುಮಕ್ಕಳಿಗೂ ದೊರೆಯುವಂತಾಗಿದೆ. ಇದಕ್ಕೆ ೧೯ನೆಯ ಶತಮಾನದ ಉತ್ತರಾರ್ಧ ಮತ್ತು ೨೦ನೆಯ ಶತಮಾನದ ಆರಂಭದಲ್ಲಿ ಅನೇಕ ಸುಧಾರಣಾವಾದಿ ಸ್ತ್ರೀಪರ ಚಿಂತಕರ ಹೋರಾಟ ಹಾಗೂ ವಿವಿಧ ಬಗೆಯ ಶಾಸನಾತ್ಮಕ ನೆಲೆಗಳು ಕಾರಣವಾಗಿವೆ. ಹೆಣ್ಣುಮಕ್ಕಳಿಗೆ ವರದಾನವಾಗಿ ಬಂದ ಶಿಕ್ಷಣ ಅವರ ವೈಯಕ್ತಿಕ, ವೈಚಾರಿಕ, ಸಾಹಿತ್ಯಿಕ ಮತ್ತು ಬೌದ್ಧಿಕ ವಿಕಾಸಕ್ಕೆ ಅನುವು ಮಾಡಿಕೊಟ್ಟಿದೆ. ಆರ್ಥಿಕ ನೆಲೆಯಲ್ಲಿ ಬಡತನದ ರೇಖೆಗಿಂತ ಕೆಳಗಿರುವ, ಅಲ್ಪಸಂಖ್ಯಾತ ಮತ್ತು ದಲಿತ ಬುಡಕಟ್ಟು ಸಮುದಾಯಗಳ ಹೆಣ್ಣುಮಕ್ಕಳಿಗೆ ಶಿಕ್ಷಣ ಇಂದಿಗೂ ಹೋರಾಟದ ಮೂಲಕವೇ ದಕ್ಕಬೇಕಾಗಿದೆ. ಅನುಕೂಲವಂತ ಮನೆಗಳಲ್ಲೂ ಹೆಣ್ಣುಮಗಳು ಇಂದು ತಾನು ಇಚ್ಛಿಸಿದ ಮತ್ತು ಇಚ್ಛಿಸುವಷ್ಟು ಶಿಕ್ಷಣ ಪಡೆಯುವ ಸುಸ್ಥಿತಿಯಲ್ಲಿದ್ದಾಳೆಯೇ ಎಂಬ ಪ್ರಶ್ನೆ ಇದ್ದೇ ಇದೆ.

* ಹೆಣ್ಣುಮಕ್ಕಳ ವಿಚಾರದಲ್ಲಿ ಉನ್ನತ ಶಿಕ್ಷಣ ಮತ್ತು ಅವರ ವಿವಾಹದ ಜವಾಬ್ದಾರಿಗಳಲ್ಲಿ ಒಂದನ್ನು ಆಯ್ಕೆ ಮಾಡಬೇಕಾದ ಸ್ಥಿತಿ ಇದ್ದಾಗ, ವಿವಾಹವೇ ಹೆತ್ತವರಿಗೆ ಆದ್ಯತೆಯ ವಿಷಯವಾಗಿ ಕಾಣುವುದು.
* ಹೆಣ್ಣುಮಕ್ಕಳಿಗೆ ಎಷ್ಟೇ ಕಲಿಸಿದರೂ ಅವರು ಇನ್ನೊಂದು ಮನೆಗೆ ಹೋಗುವವರು, ಅಲ್ಲಿ ಗೃಹಕೃತ್ಯದ ಜವಾಬ್ದಾರಿ ನಿರ್ವಹಿಸಬೇಕಾದವರು ಅವರನ್ನು ಅದಕ್ಕೆ ಸಜ್ಜುಗೊಳಿಸಬೇಕು ಎಂಬ ನಿಲುವು.
* ಒಳ್ಳೆಯ ವರ ಸಿಗುವವರೆಗೆ ಓದಲು ಅವಕಾಶ ನೀಡಿ, ಸಂಬಂಧ ಬಂದೊಡನೆ ಶಿಕ್ಷಣ ಎರಡನೆಯ ಆದ್ಯತೆಯಾಗಿ ಬಿಡುವುದು.
* ಇತ್ತೀಚೆಗೆ ಶಿಕ್ಷಣ ಮತ್ತು ದುಡಿಮೆಯ ಅವಕಾಶ ದೊರೆತರೂ ಅವು ವಿವಾಹದ ಅಗತ್ಯಗಳಿಗಾಗಿ ಒಪ್ಪಿತವಾಗಿರುವುದು.
* ಉನ್ನತ ಶಿಕ್ಷಣಕ್ಕೆ ಕಳುಹಿಸಿದರೂ ನಿರ್ದಿಷ್ಟ ಕೋರ್ಸುಗಳಿಗೆ ಹೆಣ್ಣುಮಕ್ಕಳನ್ನು ಪ್ರೋತ್ಸಾಹಿಸುವ ಇಲ್ಲವೇ ನಿರುತ್ತೇಜಿಸುವ ಪ್ರಕ್ರಿಯೆ ನಡೆಯುತ್ತಿದೆ.
* ಆರ್ಥಿಕ ಬಿಕ್ಕಟ್ಟು ಇದ್ದಲ್ಲಿ, ಮಗಳ ಶಿಕ್ಷಣಕ್ಕಿಂತ ಮಗನ ಶಿಕ್ಷಣವೇ ಪ್ರಥಮ ಆದ್ಯತೆಯಾಗುವುದು.
* ಹೆಣ್ಣುಮಕ್ಕಳಿಗೆ ಸಾಮಾಜಿಕ ಶಿಕ್ಷಣ ಸಿಕ್ಕರೆ ಸಾಕು; ಲೌಕಿಕ ಶಿಕ್ಷಣ ಏನಿದ್ದರೂ ಓದಲು, ಬರೆಯಲು ತಿಳಿದರೆ ಸಾಕು ಎಂಬ ಮನೋಧರ್ಮ ಪ್ರಚಲಿತವಾಗಿರುವುದು.

ಇತ್ತೀಚೆಗೆ ಸರ್ಕಾರಗಳು ಜಾರಿಗೆ ತಂದ ಯೋಜನೆಗಳು ಬಾಲಕಿಯರು ಶಾಲೆ ತೊರೆಯುವ ಸಂದರ್ಭಗಳನ್ನು ಗಣನೀಯ ಪ್ರಮಾಣದಲ್ಲಿ ಕುಗ್ಗಿಸಿವೆ. ಹೆತ್ತವರು ಹಲವು ಸೌಲಭ್ಯಗಳ ಕಾರಣಗಳಿಗಾಗಿ ಮಕ್ಕಳನ್ನು ಶಾಲೆಗೆ ಕಳಿಸುವತ್ತ ಒಲವು ತೋರುತ್ತಿರುವುದೂ ಕಂಡುಬರುತ್ತಿದೆ.

ಬಾಲಕಿಯರು ಶಾಲೆ ತೊರೆಯಲು ಇರುವ ಕಾರಣಗಳನ್ನು ಮೂರು ನೆಲೆಗಳಲ್ಲಿ ವಿಶ್ಲೇಷಿಸಬಹುದು.

೧. ಹೆತ್ತವರ ಧೋರಣೆಗಳು

೨. ಸಮಾಜದ ಧೋರಣೆಗಳು

೩. ಶಾಲೆಯ ಸ್ಥಿತಿಗತಿ

## ಹೆತ್ತವರ ಧೋರಣೆ

ಎಳವೆಯಲ್ಲಿ ಮಕ್ಕಳು ಶಾಲೆಯನ್ನು ತೊರೆಯುತ್ತಾರೆ ಎಂದರೆ, ಅದರಲ್ಲಿ ಮಗುವಿಗಿಂತ ಹೆತ್ತವರ ಆಸಕ್ತಿಗಳೇ ಪ್ರಧಾನವಾಗಿ ಕೆಲಸ ಮಾಡಿರುತ್ತವೆ. ಈ ಸಮಸ್ಯೆ ಆರ್ಥಿಕವಾಗಿ ದುರ್ಬಲರಾಗಿರುವ, ಗ್ರಾಮಾಂತರ ಪ್ರದೇಶ ಮತ್ತು ಬುಡಕಟ್ಟು ಸಮುದಾಯಗಳಲ್ಲಿ ವಿಶೇಷವಾಗಿ ಕಂಡುಬರುವ ಲಕ್ಷಣವಾಗಿದೆ. ಹೆತ್ತವರು ಹೆಚ್ಚಾಗಿ ಅನಕ್ಷರಸ್ಥರಾಗಿರುತ್ತಾರೆ ; ಆದುದರಿಂದಲೇ ಅವರಿಗೆ ವಿದ್ಯೆಯ ಅಗತ್ಯವಾಗಲೀ, ಮಹತ್ವವಾಗಲೀ ಮುಖ್ಯವಾಗುವುದಿಲ್ಲ. ಹೀಗಾಗಿ ಮಕ್ಕಳ ಅದರಲ್ಲೂ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಅವರದು ನಿರುತ್ಸಾಹದಾಯಕ ಪ್ರತಿಕ್ರಿಯೆಯಾಗಿರುತ್ತದೆ. ದೈನಂದಿನ ಬದುಕಿನ ವಾಸ್ತವಗಳಿಂದಾಗಿ ಅವರಿಗೆ ತಮ್ಮ ಮಕ್ಕಳು ಶಾಲೆಯಲ್ಲಿ ಕಲಿಯುವುದಕ್ಕಿಂತ ತಮ್ಮ ಕುಟುಂಬದ ನಿರ್ವಹಣೆಗೆ ನೆರವಾಗುವುದು ಆದ್ಯತೆಯ ವಿಷಯವಾಗಿರುತ್ತದೆ. ಹೀಗಾಗಿ ಬಾಲಕಿಯರನ್ನು ನೀರು ತರುವ, ಸೌದೆ ಸಂಗ್ರಹಿಸುವ, ದನಕರು ಪಾಲನೆ ಮಾಡುವ ಇಲ್ಲವೇ ಮನೆಯಲ್ಲಿರುವ ಚಿಕ್ಕಮಕ್ಕಳನ್ನು ನೋಡಿಕೊಳ್ಳುವ ಕೆಲಸಗಳಲ್ಲಿ ಅವರು ತೊಡಗಿಸುತ್ತಾರೆ. ಶಿಕ್ಷಣಕ್ಕಿಂತ ಹುಡುಗಿಯರು ವಯಸ್ಕರಾದೊಡನೆ ವಿವಾಹ ಮಾಡಿಕೊಟ್ಟು ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುವುದು ಅವರಿಗೆ ಮುಖ್ಯವಾಗಿರುತ್ತದೆ.



## ಸಮಾಜದ ಧೋರಣೆ

ಹೆಣ್ಣುಮಕ್ಕಳ ಕುರಿತಂತೆ ಕೆಲವು ಪೂರ್ವಾಗ್ರಹಗಳೂ ಸಮಾಜದಲ್ಲಿ ಚಲಾವಣೆಯಲ್ಲಿವೆ. ನಿದರ್ಶನಕ್ಕೆ 'ಹೆಣ್ಣು ಹೆಚ್ಚು ಕಲಿತರೆ ಅಹಂಕಾರಿಯಾಗುತ್ತಾಳೆ; ಗಂಡ ಮತ್ತು ಗಂಡಸರನ್ನು ಉಪೇಕ್ಷಿಸುತ್ತಾಳೆ' ಎಂಬ ನಿಲುವು ಕೆಲವು ಹೆತ್ತವರ/ಸಹೋದರರ ನೆಲೆಯಲ್ಲಿ, ಬಂಧು–ಬಾಂಧವರ ನೆಲೆಯಲ್ಲಿ ಪ್ರಕಟವಾಗುವುದು. ಹಾಗೆಯೇ ಹೆಣ್ಣುಮಕ್ಕಳನ್ನು ಕಾಲೇಜಿಗೆ ಕಳುಹಿಸಿದರೆ 'ಪ್ರೀತಿ–ಪ್ರೇಮದ ಜಾಡು ಹಿಡಿದು, ಎಲ್ಲೆಲ್ಲೋ ಓಡಾಡಿ ಹಾಳಾಗುತ್ತಾರೆ. (ನಮ್ಮ ಸಿನಿಮಾಗಳು ಇಂತ ಭಯ/ಆತಂಕಗಳಿಗೆ ಸಾಕಷ್ಟು ಪುಷ್ಟಿಯನ್ನು ಒದಗಿಸುತ್ತಿರುತ್ತವೆ). ಅನಂತರ ಅವರನ್ನು ನಿಯಂತ್ರಿಸುವುದಾಗಲೀ, ಅವರ ಮೇಲೆ ನಿಗಾ ಇಡುವುದಾಗಲೀ ಅಸಾಧ್ಯ' ಎಂಬ ಮಾತುಗಳೂ ಕೇಳಿಬರುತ್ತವೆ. ನಿರ್ದಿಷ್ಟ ಜಾತಿ/ಧರ್ಮಗಳಲ್ಲಿ ಹೆಣ್ಣುಮಕ್ಕಳು ಕಾಲೇಜು ಮೆಟ್ಟಿಲು ಹತ್ತಿಲ್ಲದ ಸಂದರ್ಭಗಳಲ್ಲಂತೂ ಹೆಣ್ಣುಮಕ್ಕಳ ಮೇಲಿನ ಒತ್ತಡಗಳು ಇನ್ನಷ್ಟು ಬಲವಾಗಿರುತ್ತವೆ. ಜನರಿಂದ, ಬಂಧು–ಬಾಂಧವರಿಂದ ಟೀಕೆ, ಹೆತ್ತವರ ಅಳುಕಿಗೆ ಒಂದು ನೆಲೆ ಕಾರಣವಾದರೆ, 'ಏನಾದರೂ ಹೆಚ್ಚು ಕಡಿಮೆ ಆದರೆ ಮನೆತನಕ್ಕೆ ಕಪ್ಪುಮಸಿ ಬಳಿದಂತಾದೀತು' ಎಂಬ ಆತಂಕ ಇನ್ನೊಂದು ಕಾರಣವಾಗಿರುತ್ತದೆ.

## ಶಾಲೆಯ ಸ್ಥಿತಿಗತಿ

ಶಾಲೆಗಳೂ ಬಾಲಕಿಯರ ಶಿಕ್ಷಣಕ್ಕೆ ಪೂರಕವಲ್ಲದ ಪರಿಸ್ಥಿತಿಯನ್ನು ನಿರ್ಮಿಸಿವೆ. ಅವುಗಳಲ್ಲಿ ಪ್ರಧಾನವಾಗಿ ಗುರುತಿಸಬೇಕಾದುದು ಶಾಲೆಗಳಲ್ಲಿ ಶೌಚಾಲಯದಂತಹ ಮೂಲ ಸೌಲಭ್ಯಗಳ ಕೊರತೆ. ಕೆಲವು ನೂರು ಮಕ್ಕಳಿರುವ ಶಾಲೆಗಳಲ್ಲಿ ಮೂತ್ರಾಲಯಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ! ಇನ್ನು ಅವುಗಳಲ್ಲಿ ನೀರಿನ ಸೌಲಭ್ಯ ಇಲ್ಲ. ಪಾಯಿಖಾನೆಯ ಅನುಕೂಲವಂತೂ ದೂರದ ಮಾತು. ಇಂತ ಕಡೆಗಳಲ್ಲಿ ಬೆಳೆಯುತ್ತಿರುವ ಬಾಲಕಿಯರು ವಿಶಿಷ್ಟ ಮತ್ತು ಸಂಕೀರ್ಣ ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ.

ಶಾಲೆಯು ಗ್ರಾಮ ಅಥವಾ ಜನವಸತಿ ಪ್ರದೇಶಗಳಿಂದ ದೂರ ಇದ್ದಾಗ, ಶಾಲೆಗೆ ಸಂಪರ್ಕ ಸಾಧನಗಳಾದ ಬಸ್ಸುಗಳ ಓಡಾಟ ಕಡಿಮೆ ಇದ್ದಾಗ, ಇಂತಹ ಇತರ ಕೆಲವು ಸಮಸ್ಯೆಗಳೂ ಬಾಲಕಿಯರು ಶಾಲೆಯನ್ನು ತೊರೆಯಲು ಒತ್ತಾಯಿಸುತ್ತವೆ.

ಬರುವ ದಿನಗಳಲ್ಲಿ ಈ ಸಮಸ್ಯೆಗಳನ್ನು ನಿವಾರಿಸಿಕೊಂಡು ಶಿಕ್ಷಣ ಪದ್ಧತಿ ಇನ್ನಷ್ಟು ಧನಾತ್ಮಕ ಆಯಾಮ ಒಳಗೊಳ್ಳಬೇಕಿದೆ.

**(ಆಕರ – ಮಹಿಳಾ ಅಧ್ಯಯನದ ನೆಲೆಗಳು)**

### ಅಭ್ಯಾಸ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ**

೧. ಹೆಣ್ಣುಮಕ್ಕಳು ಶಾಲೆಯನ್ನು ತೊರೆಯಲು ಇರುವ ಕಾರಣಗಳಾವುವು?

೨. ಹೆಣ್ಣುಮಕ್ಕಳು ಕಲಿಯುವ ಬಗ್ಗೆ ಇರುವ ಹೆತ್ತವರ ಧೋರಣೆಗಳು ಹೇಗಿವೆ?

೩. ಹೆಣ್ಣುಮಕ್ಕಳ ಕಲಿಕೆ ಕುರಿತು ಸಮಾಜದ ಧೋರಣೆಗಳು ಹೇಗಿವೆ?

೪. ಶಾಲೆಗಳ ಸ್ಥಿತಿ–ಗತಿಯ ಹಿನ್ನೆಲೆಯಲ್ಲಿ ಹೆಣ್ಣುಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳು ಯಾವವು?

೫. ಮಹಿಳಾ ಶಿಕ್ಷಣದ ಔಚಿತ್ಯ ಮತ್ತು ಅಗತ್ಯಗಳನ್ನು ಕುರಿತು ಬರೆಯಿರಿ.



## ಪೋಷಕ ಪಾಠ – ೦೫

# ಪುಟ್ಟಹಕ್ಕಿ

[ಗಜ಼ಲ್]

– ಜಂಬಣ್ಣ ಅಮರಚಿಂತ

ಕಡ್ಡಿ ಕಡ್ಡಿ ಕೂಡಿಸಿ ಗೂಡು ಕಟ್ಟುವುದು ಪುಟ್ಟಹಕ್ಕಿ
ಬಿರುಗಾಳಿಯ ವಿರುದ್ಧ ಯುದ್ಧ ಸಾರುವುದು ಪುಟ್ಟಹಕ್ಕಿ

ಸುರಿವ ಸೋನೆ ಮಳೆಗೆ ಅಂಜಿ ಮನೆಯೊಳಗಡಗಿದವು
ಗೂಡಿನಿಂದ ಹೊರಬಂದು ಕುಣಿಯುತ ಜಳಕ ಮಾಡುವುದು ಪುಟ್ಟಹಕ್ಕಿ

ಕತ್ತಲೆ ಕಳೆದು ಬೆಳಕು ಹರಿದರೂ ನಿದ್ದೆಯಲಿ ಮುಳುಗಿರುವವು
ಸೂರ್ಯನನು ಸ್ವಾಗತಿಸುತ, ಗೀತೆಹಾಡುವುದು ಪುಟ್ಟಹಕ್ಕಿ

ಮೂಡಿದ ರೆಕ್ಕೆಗಳ ಮುರಿಯುವ ಜನರಿರುವರು ಜಗದಲಿ
ಅವರ ನಯನಾಂಬರದಲಿ ಹಾರೆಂದರೆ ಹೇಗೆ ಹಾರುವುದು ಪುಟ್ಟಹಕ್ಕಿ

ನೀವೆಷ್ಟು ತಡೆಗೋಡೆ ಕಟ್ಟಿದರೂ ಜಗದಂಗಳದಲಿ
ಆ ಮೂಲೆಯಿಂದ ಈ ಮೂಲೆಗೆ ಸದಾ ಹಾರುವುದು ಪುಟ್ಟಹಕ್ಕಿ

ಭೂಮಿಯಲಿ ಭುಜಂಗನ ಭಯ, ಆಕಾಶದಲಿ ಗಿಡುಗನ ಭಯ
ಆವರಿಸಿದ್ದರೂ ಅಳುಕದೆ ರೆಕ್ಕೆ ಬಿಚ್ಚಿ ಹಾರುವುದು ಪುಟ್ಟಹಕ್ಕಿ



## ಅಭ್ಯಾಸ

- **ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ**

೧. ಪುಟ್ಟಹಕ್ಕಿ ಗೂಡನ್ನು ಹೇಗೆ ಕಟ್ಟುತ್ತದೆ?

೨. ಗೀತೆಯನ್ನು ಹಾಡುತ್ತಾ ಪುಟ್ಟಹಕ್ಕಿ ಯಾರನ್ನು ಸ್ವಾಗತಿಸುತ್ತದೆ?

೩. ಜಗದಲ್ಲಿ ಎಂತಹ ಜನರಿರುವರು?

೪. ಪುಟ್ಟಹಕ್ಕಿ ಜಗದಂಗಳದಲ್ಲಿ ಹೇಗೆ ಹಾರುತ್ತದೆ?

೫. ಭೂಮಿ–ಆಕಾಶದಲ್ಲಿ ಪುಟ್ಟಹಕ್ಕಿಗೆ ಯಾರ ಭಯವಿದೆ?

# ಪಠ್ಯಾಧಾರಿತ ಪದಕೋಶ

## ಅ

ಅಂಗಲಾಚು – ಮೊರೆಯಿಡು, ಬೇಡು

ಅಂಬರ – ಆಕಾಶ, ಗಗನ, ಶೂನ್ಯಪ್ರದೇಶ, ಪಂಚಭೂತಗಳಲ್ಲಿ ಒಂದು, ಬಿಂದು, ಸೊನ್ನೆ

ಅಂಬಿಗ – ದೋಣಿ/ನಾವೆ ನಡೆಸುವಾತ, ನಾವಿಕ, ಬೆಸ್ತರವನು, ಮೀನುಗಾರ, ಅಂಬನ್ನು ಹಿಡಿದವನು

ಅಂಬು – ಬಾಣ, ಸರಳು, ನೀರು, ಜಲ, ಮಡಿವಾಳ, ಇಣಗು, ಆರು

ಅಂಬುಜ – ತಾವರೆ, ಕಮಲ, ಶಂಖ, ನೀರಿನಲ್ಲಿ ಹುಟ್ಟಿದುದು, ನಿಚುಲವೃಕ್ಷ

ಅಗಸೆ ಬಾಗಿಲು – ಊರು, ಕೋಟೆ ಮುಂತಾದುದರ ಹೆಬ್ಬಾಗಿಲು, ಮಹಾದ್ವಾರ, ಒಂದು ಬಗೆಯ ಮರ/ಧಾನ್ಯ

ಅಟಾಟೋಪ – ದಬ್ಬಾಳಿಕೆ, ದರ್ಪ, ಆಡಂಬರ, ಅಬ್ಬರ

ಅಡರ್ – ಏರು, ಮೇಲಕ್ಕೆ ಹತ್ತು, ಹಬ್ಬು, ಆಕ್ರಮಿಸು, ಆಧಾರ

ಅನುಪಮ – ಎಣೆಯಿಲ್ಲದ, ಸಾಟಿಯಿಲ್ಲದ, ಉತ್ಕೃಷ್ಟವಾದ, ಅಸಮಾನವಾದ, ಹೋಲಿಕೆಗೆ ಮೀರಿದ

ಅನುವಾಗು – ಸಿದ್ಧನಾಗು, ತಯಾರಾಗು

ಅಭವ – ಶಿವ, ಚರ್ಮಾಂಬರ, ಶಿತಿಕಂಠ, ಶಿಖಿನಯನ, ತ್ರಿಮೂರ್ತಿಗಳಲ್ಲಿ ಒಬ್ಬ, ಈಶ್ವರ, ಮಂಗಳ, ಶುಭ

ಅಭಿನವ – ಹೊಸದಾದ, ನೂತನವಾದ, ಈಗಿನ

ಅಮರ – ಶಾಶ್ವತ, ಚಿರಂಜೀವಿ,

ಅರಯ್ – ಹುಡುಕು, ಪತ್ತೆ ಹಚ್ಚು, ಕಾಪಾಡು, ವಿಚಾರಿಸು, ರಕ್ಷಿಸು, ವಿಮರ್ಶಿಸು

ಅರವಳಿಕೆ – ಅರಿವನ್ನು ಅಳಿಸುವ ಔಷಧಿ, ನೋವಿನ ಅನುಭವವಾಗದಂತೆ ಮಾಡುವ ಔಷಧಿ

ಅಲವಳಿಸು – ದುಃಖಿಸು

ಅಲ್ಲಳಿ – ಚದುರು, ಚಲ್ಲಾಪಿಲ್ಲಿ

ಲೋಕನ ವಿದ್ಯೆ – ಅದೃಶ್ಯವಾಗುವ ವಿದ್ಯೆ, ಮಾಯಾವಾಗುವ ವಿದ್ಯೆ

ಅಹಂ – ಗರ್ವ, ಹೆಮ್ಮೆ, ನಾನು ಎಂಬ ಭಾವ

ಅಳವಿ – ಹತ್ತಿರ, ಅಳತೆ, ಯೋಗ್ಯತೆ, ಶಕ್ತಿ, ವಶ, ಯುದ್ಧ, ಶಕ್ಯ

ಅಳವೇ – ಸಾಧ್ಯವೇ

ಅಳ್ಕಿ – ನಾಚಿ

## ಆ

ಆದಿ – ಮೊದಲು, ಪ್ರಾರಂಭ, ಪೂರ್ವಕಾಲ, ಮೂಲ

ಆಜ್ಞೆ – ಅಪ್ಪಣೆ, ನಿರ್ದೇಶನ, ಅನುಮತಿ, ಅವಕಾಶ

ಆವು – ಹಸು, ಆಕಳು, ಗೋವು

## ಉ

ಉಪಶಮನ – ಗುಣವಾಗು, ಕಡಿಮೆಯಾಗು, ಶಾಂತವಾಗು, ಶಮನವಾಗು

ಉಪೇಕ್ಷಿಸು – ತಿರಸ್ಕರಿಸು, ಅಲಕ್ಷಿಸು, ಕಡೆಗಣಿಸು, ಉದಾಸೀನ ಮಾಡು

ಉಸುಬು – ಮರಳು, ಉಸುಕು

ಉಳಿಸೆಂಡಿನಾಟ – ಚೆಂಡನ್ನು ಅಡಗಿಸಿಟ್ಟು ಆಡುವ ಆಟ, ಚಂಡನ್ನು ಬಚ್ಚಿಟ್ಟು ಆಡುವ ಆಟ

### ಎ

ಎಕ್ಕಲ – ಕಾಡುಹಂದಿ, ಸಲಗ, ಒಂಟಿ, ಬಲಿಷ್ಠ

ಎಸೆ – ಶೋಭಿಸು, ಬಾಣಪ್ರಯೋಗಿಸು, ಬಿಸಾಡು, ಎಸೆಯು

ಎಳವೆ – ಬಾಲ್ಯ, ಎಳೆಯತನ, ಚಿಕ್ಕಂದಿನಲ್ಲಿ

### ಏ

ಏಕತಾನತೆ – ಒಂದೇ ರೀತಿಯ, ಒಂದೇ ಶ್ರುತಿ, ಏಕಾಗ್ರ ಚಿತ್ತ

### ಒ

ಒಗೆ – ಎಸೆ, ಬಿಸಾಡು, ನೆಗೆ, ಹಾರು, ಸೆಣೆತ

ಒಡರಿಸೆ – ಉಂಟಾಗಲು, ಒದಗು, ನೀಗು, ತೊಡಗು

### ಓ

ಓರಂತಪ್ಪ – ಸಮಾನವಾದ, ಕ್ರಮಬದ್ಧ, ಒಂದೇ ಸಮನಾಗಿ

ಓಲಗ – ರಾಜಸಭೆ, ದರ್ಬಾರು, ನಾಗಸ್ವರ, ಆಳು, ಊಳಿಗ

### ಕ

ಕಗ್ಗಾಡು – ದಟ್ಟ ಅರಣ್ಯ, ಗೊಂಡಾರಣ್ಯ

ಕಜ್ಜ – ಕೆಲಸ, ಕಾರ್ಯ, ಉಪಾಯ, ಪರಿಹಾರ

ಕದನ – ಯುದ್ಧ, ಕಾಳಗ, ಕೊಲ್ಲುವಿಕೆ, ನಾಶಪಡಿಸು

ಕಥನಕವನ – ಹಾಡಿನ ಮೂಲಕ ಹೇಳುವ ಕಥೆ, ಕಥೆಯನ್ನೊಳಗೊಂಡ ಪದ್ಯಕಾವ್ಯ, ಕಥನ ರೂಪದ ಕವನ

ಕಪ್ಪಡ – ಬಟ್ಟೆ, ವಸ್ತ್ರ, ಚಿಂದಿಬಟ್ಟೆ, ಹರಕಲು ವಸ್ತ್ರ

ಕಮಲಜ – ಬ್ರಹ್ಮ, ಕಮಲದಲ್ಲಿ ಹುಟ್ಟಿದವನು

ಕರಣಿಗಟ್ಟು – ಹೆಪ್ಪುಗಟ್ಟು

ಕಲಕಂಠ – ಇಂಪಾದ ಧ್ವನಿ, ಕೋಗಿಲೆ, ದುಂಬಿ

ಕಸವರ – ಹೊನ್ನು, ಚಿನ್ನ, ಧನ, ಸಂಪತ್ತು

ಕಾಂಬ – ಕಾಣುವ, ನೋಡಲು ಸಾಧ್ಯವಾಗುವ

ಕಾಳಗ – ಯುದ್ಧ, ಕಲಹ

ಕ್ಲಿಷ್ಟ – ಕಠಿಣ, ಕಷ್ಟ, ತೊಂದರೆ, ಪೀಡೆ

ಕುನ್ನಿ – ನಾಯಿಮರಿ, ಯಾವುದಾದರೂ ಪ್ರಾಣಿಯ ಮರಿ, ಗಂಡುಕೂಸು, ರಕ್ತಗುಂಜಿ

ಕುಬ್ಜೆ – ಬೆನ್ನುಬಾಗಿದವಳು, ಗೂನಿ

ಕೇರಿ – ಮನೆಗಳ ಸಾಲುಗಳ ನಡುವಿನ ಹಾದಿ, ಬೀದಿ, ಸಾಲು, ಶ್ರೇಣಿ

ಕೋಡಿಸು – ಹೊರಚೆಲ್ಲು, ಹೊರಸೂಸು, ಹೊರಹೊಮ್ಮು

ಕೋದಂಡ – ಬಿಲ್ಲು, ಧನಸ್ಸು, ಹಿಂದೆ ತುಂಟ ವಿದ್ಯಾರ್ಥಿಗಳಿಗೆ ವಿಧಿಸುತ್ತಿದ್ದ ಶಿಕ್ಷೆ

### ಖ

ಖಬರು – ಎಚ್ಚರ, ಅರಿವು

ಖರ್ವಡ – ಚಿಕ್ಕ ಪ್ರಾಕಾರವಿರುವ ಊರು, ನಗರ ಮತ್ತು ಹಳ್ಳಿಗಳ ಮಧ್ಯಸ್ಥಿತಿಯಲ್ಲಿದ್ದು ಬೆಟ್ಟಗಳಿಂದ ಸುತ್ತುವರಿದ ಊರು

ಖಿನ್ನ – ದುಃಖಿತ, ಚಿಂತೆಗೊಳಗಾದ, ವಿಷಾದ, ನೊಂದ, ದಣಿದ, ಆಯಾಸಗೊಂಡ

ಖೇಡ – ಎತ್ತರವಾದ ಕೋಟೆಯಿಂದ, ಆವೃತವಾದ ಊರು, ಹಳ್ಳಿ, ಗ್ರಾಮ, ಭಯಗ್ರಸ್ತ, ಹೆದರಿದವ

## ಗ

ಗರಳ – ವಿಷ, ಹಾವಿನ ವಿಷ

ಗಿರಕಿ – ತಿರುಗು, ತಲೆ ಕೆಳಗಾಗಿ ಬೀಳುವಿಕೆ, ಲಾಗ, ದಿಂಡುರುಳು, ಚಕ್ರಾಕಾರವಾಗಿ ಸುತ್ತುವುದು

ಗುಣಿ – ಡೊಳ್ಳು ಬಾರಿಸುವ ಮರದ ತುಂಡು, ಕುಳಿ, ತಗ್ಗು, ಸಣ್ಣಕೋಲು, ಗುಣವಂತ

ಗೋರಿ – ಸಮಾಧಿ, ಹೆಣ ಹೂಳುವ ಜಾಗ, ಹಲುಬೆ, ಆಕರ್ಷಣೆ, ಸೆಳೆತ

## ಘ

ಘೋರ – ಕಠಿಣ, ಕ್ರೂರ, ಉಗ್ರ, ಭಯಂಕರ, ಬಲವಾದ, ಹಿಂಸೆ, ತೊಂದರೆ

## ಚ

ಚಂಡೆ – ಒಂದು ಚರ್ಮ ವಾದ್ಯ, ಚೆಂಡೆ ದುರ್ಗಿ

ಚಂಪಕ – ಸಂಪಿಗೆ ಮರ, ಕೇಸರಿ ಬಣ್ಣ, ಒಂದು ಬಗೆಯ ಕೆಂಪು ಬಣ್ಣ

ಚಕ್ಕಡಿ – ಎತ್ತಿನಗಾಡಿ, ಬಂಡಿ, ಜಕ್ಕಡಿ

ಚಕ್ರಿ – ಚಕ್ರವರ್ತಿ, ಕುಂಬಾರ, ಚಕ್ರಾಯುಧವನ್ನುಳ್ಳವನು

ಚರು – ಹವಿಸ್ಸು, ನೈವೇದ್ಯ, ಬಲಿ, ಒಂದು ಬಗೆಯ ಸಣ್ಣ ಮೀನು

ಚಾರಣ – ಕಾಲ್ನಡಿಗೆಯಲ್ಲಿ ಗುಡ್ಡಬೆಟ್ಟ ಮುಂತಾದವಲ್ಲಿ ಸಂಚರಿಸುವುದು, ಸಂಚಾರ, ತಿರುಗಾಡಿವಿಕೆ, ಸ್ತುತಿ ಪಾಠಕ, ಗಂಧರ್ವ, ಧರ್ಮೋಪದೇಶ ಮಾಡುತ್ತಾ ಸಂಚರಿಸುವ ಜೈನಮುನಿ

ಚಿತ್ತ – ಮನಸ್ಸು, ಅಪೇಕ್ಷೆ, ಆಶಯ, ಗುರಿ, ಉದ್ದೇಶ

## ಛ

ಛಾವಿ – ಕಾಂತಿ, ಬೆಳಕು, ಹೊಳಪು, ಚೆಲುವು, ಲಾವಣ್ಯ, ಬಯಕೆ, ಕಾವ್ಯದ ಹತ್ತು ಗುಣಗಳಲ್ಲಿ ಒಂದು

## ಜ

ಜವುಗು – ಸವುಳು ಭೂಮಿ, ಸದಾ ನೀರು ಜಿನುಗುವ/ಒಸರುವ ಪ್ರದೇಶ, ಸದಾ ತೇವ ಇಲ್ಲವೇ ಒದ್ದೆಯಾದ ಪ್ರದೇಶ

ಜುಳುಕಿಸು – ನಡುಗಿಸು

ಜೋಮ್ಮು – ಜೋಂಪು, ತೂಕಡಿಕೆ, ಮೈಮರ ಗಟ್ಟುವುದು, ಜೊಮ್ಮು

ಜೋಯಿಷ – ಜ್ಯೋತಿಷಶಾಸ್ತ್ರ ತಿಳಿದವ,ಜ್ಯೋತಿಷಿ, ಗ್ರಹಗತಿಗಳನ್ನು ಬಲ್ಲ ಶಾಸ್ತ್ರಜ್ಞ

ಜೋಳಿಗೆ – ನೇತು ಹಾಕಿಕೊಳ್ಳುವ ಉದ್ದನೆಯ ಚೀಲ, ಬಟ್ಟೆಯಿಂದ ಮಾಡಿದ ತೊಟ್ಟಿಲು, ಮಕ್ಕಳನ್ನು ಮಲಗಿಸಲು ಅನುವಾಗುವಂತೆ ಮೇಲಿನಿಂದ ತೂಗು ಬಿಟ್ಟ ಬಟ್ಟೆ

## ಠ

ಠೀವು – ಬಿನ್ನಾಣ, ಬೆಡಗು, ಗತ್ತು

### ತ

ತಂಡುಲ – ಅಕ್ಕಿ, (ಕಮಲದ)ಬೀಜ, ಏಳು ಬಗೆಯ ದ್ರವ್ಯಗಳಲ್ಲಿ ಒಂದು, ವಾಯುವಿಳಂಗ

ತಂಬುಲ – ತಾಂಬೂಲ, ಅಡಕೆ, ಅಡಕೆ ಮತ್ತು ಎಲೆ, ಅಗಿದು ಉಗುಳುವ ಕವಳ

ತಮಾಳ – ಹೊಂಗೆಮರ, ಕತ್ತಲೆ, ಅಂಧಕಾ

ತರಣಿ – ಸೂರ್ಯ, ನೇಸರ, ಹರಿಗೋಲು, ದೋಣಿ

ತರಲ – ಚಂಚಲ, ಅಸ್ಥಿರವಾದ, ವಿಸ್ಮಯ, ಬೆರಗು

ತರು – ಮರ, ವೃಕ್ಷ, ಕೊಂಡುಕೊಳ್ಳು

ತಲ್ಲಣ – ತಳಮಳ, ಕಳವಳ, ಅಂಜಿಕೆ, ಕಕ್ಕಾಬಿಕ್ಕಿ, ದಿಗ್ಭ್ರಮೆ

ತಳವಾರ – ಕಾವಲುಗಾರ, ತಳವರ, ಕತ್ತಿ, ಖಡ್ಗ

ತಾರಕಸ್ವರ – ಏರುದನಿ, ಸಂಗೀತದ ಮೂರು ಸ್ವರಸ್ಥಾಯಿಗಳಲ್ಲಿ ಕೊನೆಯದು

ತಾಣ – ನೆಲೆ, ಬೀಡು

ತಿರೋಹಿತ – ಮಾಯವಾಗು, ಮರೆಯಮಾಡಿದ ಅಡಗಿಸಿದ

ತಿಲಕ – ಶ್ರೇಷ್ಠ, ಹಣೆಯ ಮೇಲೆ ಇಟ್ಟುಕೊಳ್ಳುವ ಬೊಟ್ಟು, ಅಲಂಕಾರ ಪ್ರಾಯನಾದ

ತಿಳಕ – ತಿಲಕ ಪುಷ್ಪ

ತೆರೆ – ತರಂಗ, ಅಲೆ, ಬಿಚ್ಚು, ರಜತ ಪರದೆ

ತೊತ್ತು – ಸೇವಕ, ದಾಸಿ, ದಾಸ, ಜಾತಿ, ಸೇವಕಿ

### ಥ

ಥಾಳಿಸು – ಪ್ರಕಾಶಗೊಳಿಸು, ದೇದೀಪ್ಯಮಾನಗೊಳಿಸು

### ದ

ದಂಡಿಗೆ – ಪಲ್ಲಕ್ಕಿ, ಕೋಲು, ದಂಡ, ತಕ್ಕಡಿಯಕೋಲು, ಮುತ್ತಿನ ಸರ

ದಳ್ಳುರಿ – ವಿಪರೀತ ಬೆಂಕಿ, ತೀವ್ರವಾಗಿ, ಉರಿ, ದೊಡ್ಡ ಉರಿ, ಭುಗಿಲಿಡುವ ಕಿಚ್ಚು

ದಿವಂ – ಸ್ವಗ, ದೇವಲೋಕ

ದಿನ್ನಿ – ದಿಬ್ಬ, ಗುಡ್ಡ

ದಿವಿಜೇಂದ್ರ – ದೇವೇಂದ್ರ

ದಿವಿನಾಗು – ಮೈತುಂಬಿಕೊಳ್ಳು, ಚೆನ್ನಾಗಿಯಾಗು, ಗಟ್ಟಿಮುಟ್ಟಾಗು

ದೀಪ್ತ – ಕಾಂತಿಯುಕ್ತ, ಪೂರ್ವದಿಕ್ಕು, ಉರಿಯುವ, ಮಿರುಗುವ

ದೀವಿಟಿಗೆ – ಪಂಜು, ದೊಂದಿ

ದ್ರೋಣಾಮುಖ – ಜಲಮಾರ್ಗ ಮತ್ತು ನೆಲ ಮಾರ್ಗಗಳೆರಡನ್ನೂ ಹೊಂದಿರುವ ಪುರ

### ಧ

ಧೃತಿ – ಧೈರ್ಯ, ಧೀರತನ, ಕಿಚ್ಚು, ತಾಳ್ಮೆ, ಸಹನೆ

ಧುರ – ಯುದ್ಧ, ಕಾಳಗ, ಮೂಕಿ, ಹೊಣೆ, ಜವಾಬ್ದಾರಿ

### ನ

ನಭ – ಆಕಾಶ, ಗಗನ, ಮೋಡ, ಮುಗಿಲು, ಶೂನ್ಯ, ಸೊನ್ನೆ

ನಯನ – ಕಣ್ಣು, ನೇತ್ರ, ಅಕ್ಷಿ, ಎರಡು ಎಂಬ ಸಂಖ್ಯೆಯ ಸಂಕೇತ, ವಾಹನ, ಸಾಗಿಸು

ನಿರುತ – ನಿಜ, ದಿಟ, ಸತ್ಯ, ಪ್ರಾಮಾಣಿಕತೆ

ನಿಶ್ಶಂಕೆ – ಸಂಶಯವಿಲ್ಲದ, ಶಂಕೆಯಿಲ್ಲದ

ನೃಪ – ರಾಜ, ದೊರೆ, ಅರಸ

ನೆಗಟ್ಟಿ – ಪ್ರಸಿದ್ಧವಾದ, ಕೀರ್ತಿ, ಕಾಂತಿ, ಶೋಭೆ

ನೆರಪಿ – ಸೇರಿಸಿ, ಕೂಡಿಸಿ

ನೆಟಿ – ಚೆನ್ನಾಗಿ, ಹೆಚ್ಚಾಗಿ, ಅಧಿಕವಾಗಿ, ಪಕ್ಕಾ

ನೇಪಥ್ಯ – ತೆರೆಯ ಹಿಂಭಾಗ, ನಾಟಕದಲ್ಲಿ ವೇಷ ಭೂಷಣಗಳನ್ನು ಮಾಡಿಕೊಳ್ಳಲು ಇರುವ ರಂಗಭೂಮಿಯ ಹಿನ್ನೆಲೆ

ನೈದಿಲೆ – ಕುಮುದ, ನೀರಿನಲ್ಲಿ ಬೆಳೆಯುವ ಹೂವು, ಕೆಂದಾವರೆ

## ಪ

ಪಟ್ಟದರಸಿ – ಪಟ್ಟದರಾಣಿ, ಪಟ್ಟಮಹಿಷಿ

ಪಡಿಯರ – ದ್ವಾರಪಾಲಕ, ಬಾಗಿಲುಕಾಯುವವ, ಪ್ರತಿಹಾರಿ

ಪತ್ನಿ – ಹೆಂಡತಿ, ಮಡದಿ, ಮನೆ ಒಡತಿ, ಯಜಮಾನಿ

ಪತ್ರೆ – ಎಲೆ, ಪರ್ಣ, ಬಿಲ್ವ/ಬನ್ನಿ ಮುಂತಾದವುದರ ಎಲೆ

ಪದತಳ – ಕಾಲಿನ ಕೆಳಗೆ, ಅಂಗಾಲು

ಪರಿವೀಕ್ಷಿಸು – ಆಲೋಚಿಸಿ, ಪರಿಶೀಲಿಸು, ವೀಕ್ಷಿಸು

ಪಾಂಗು – ರೀತಿ, ಆಕಾರ, ರೂಪು

ಪಾರಣೆ – ಉಪವಾಸ ವ್ರತದ ಮಾರನೆ ದಿನದ ಊಟ, ತೃಪ್ತಿ, ಸಂತೋಷ

ಪಾವ್ – ಹಾವು, ಉರಗ

ಪುನ್ನಾಗ – ಸುರಗಿ ಮರ, ಸುರಹೊನ್ನೆ, ಶ್ರೇಷ್ಠ ಆನೆ, ಕೋಣ

ಪುರ್ಬು – ಹುಬ್ಬು, ಭ್ರೂ

ಪ್ರೇರೇಪಿಸು – ಉತ್ತೇಜಿಸು, ಪ್ರೇರಿಸು, ಹುರುಪುಗೊಳಿಸು

ಪೊಟಿಲ್ – ಪಟ್ಟಣ, ನಗರ, ಊರು

ಪೊಯ್ – ಹೊಡೆ, ಬಡಿ, ತಬಲ/ಮೃದಂಗ ಮುಂತಾದ ವಾದ್ಯಗಳನ್ನು ಬಾಜಿಸುವ/ಬಾರಿಸು

ಪ್ರಧಾನ – ಮುಖ್ಯ, ಪ್ರಮುಖ, ವಿಶೇಷ, ಹಿರಿದಾದ

## ಬ

ಬಕುಳ – ಪವಳದಮರ, ಹೂ, ನಾಗಕೇಸರ

ಬೇಗೆ – ಸಂಕಟ, ತಳಮಳ, ದುಃಖ, ತಾಪ

ಬೆರಗು – ಆಶ್ಚರ್ಯ, ವಿಸ್ಮಯ,ಸೋಜಿಗ, ಅಚ್ಚರಿ

ಬುನಾದಿ – ತಳಹದಿ, ಅಡಿಪಾಯ, ಅಸ್ಥಿಭಾರ, ಪ್ರಾರಂಭ

ಬೇಳ್ವೆ – ಆಹುತಿ, ಬಲಿ, ಹೋಮ

ಬೆಂಬಳಿ – ಹಿಂಬಾಲಿಸು, ಬೆನ್ನಟ್ಟು, ಅನುಸರಣೆ, ಅಟ್ಟಿಸಿಕೊಂಡು ಹೋಗು

ಬಿಟ್ಟಿ – ಉಚಿತ, ಪುಕ್ಕಟೆ, ನಿರುಪಯುಕ್ತ

ಬೆಸಸೆ – ಆಜ್ಞೆ ಮಾಡಲು, ಅಜ್ಞಾಪಿಸು, ಅಪ್ಪಣೆ ಮಾಡು

ಬಿನ್ನಹ – ಅರಿಕೆ, ಕೋರಿಕೆ, ಬೇಡು, ವಿಜ್ಞಾಪನೆ, ವಿನಂತಿ

ಬಿದ್ದು – ಔತಣ, ವಿಶೇಷ ಭೋಜನ, ಮೃಷ್ಟಾನ್ನ ಭೋಜನ

ಬಸವಳಿ – ಆಯಾಸಗೊಳ್ಳು, ಸುಸ್ತಾಗು, ಸೋತು ಹೋಗು

ಬೆಬ್ಬಳಿಸು – ಸೋಜಿಗಪಡು, ಆಶ್ಚರ್ಯಪಡು, ಚಕಿತಗೊಳ್ಳು

ಬಗೆ – ಯೋಚಿಸು, ಆಲೋಚನೆ

## ಭ

ಭವ – ಜನ್ಮ, ಹುಟ್ಟು, ಪ್ರಾಪಂಚಿಕ ವ್ಯವಹಾರ, ಪುನರ್ಜನ್ಮ

ಭಾಸುರ – ಅಂದ, ಸೊಗಸು, ಪ್ರಕಾಶ, ಹೊಳಪು

ಭಾಸ್ಕರ – ಸೂರ್ಯ, ಅರ್ಕ, ದಿನಕರ, ರವಿ, ನೇಸರ

ಭಾವೋದ್ರೇಕ – ಭಾವನಾ ಪರವಶತೆ

ಭುಜಂಗ – ಹಾವು, ಸರ್ಪ, ಉರಗ

ಭೂತಳ – ಭೂಮಿ, ಭುವಿ, ಪೃಥ್ವಿ , ವಸುಂಧರ, ನೆಲ

## ಮ

ಮಡಂಬ – ಐನೂರು ಹಳ್ಳಿಗಳಿಗೆ ಮುಖ್ಯವಾದ ನಗರ, ದೂರಸ್ಥಳ

ಮರ್ತ್ಯ – ಭೂಮಿ, ಭೂಲೋಕ, ಮನುಷ್ಯ, ಮರಣ ಹೊಂದುವ

ಮನುಜ – ಮನುಷ್ಯ, ಮಾನವ

ಮರುಳ – ಹುಚ್ಚ, ಬುದ್ಧಿಭ್ರಮೆ, ತಿಳಿಗೇಡಿ

ಮಸಗು – ಹರಡು, ವ್ಯಾಪಿಸು, ಕೆರಳು, ಉಕ್ಕೇರು

ಮಸ್ತಕ – ತಲೆ, ಶಿರ, ಮಂಡೆ, ತುದಿ, ಶಿಖರ

ಮಾರುತಿ – ಹನುಮಂತ, ಆಂಜನೇಯ

ಮಾವಟಿಗ – ಆನೆ ನಡೆಸುವವನು, ಆನೆ ಸವಾರ,

ಮುಂಜಾವು – ಬೆಳಗು, ಬೆಳಗ್ಗೆ, ಬೆಳಗಾಗುವ ಹೊತ್ತು

ಮುಂಡಾಸು – ಪೇಟ, ರುಮಾಲು

ಮುಸುಡು – ಮುಖ, ಮೊಗ, ಮೋರೆ

ಮೂಗೆಳೆ – ಉಪೇಕ್ಷಿಸು, ನಿರ್ಲಕ್ಷಿಸು

ಮೂಡಿಗೆ – ಬತ್ತಳಿಕೆ, ಬಾಣಗಳನ್ನಿಡುವ ಚೀಲ, ಉದ್ದವಾದ ಕಂಬ

ಮೂದಲಿಸು – ಹಂಗಿಸು, ಚುಚ್ಚು ಮಾತು, ಹೀಯಾಳಿಸು

ಮೂಲೋಕ – ಮೂರುಲೋಕ, ಮೂಜಗ, ಸ್ವರ್ಗ–ಮರ್ತ್ಯ–ಪಾತಾಳ ಇವು ಮೂರು ಲೋಕಗಳು

ಮೇಲುದೆ – ಹೆಂಸರು ಮೈಮೇಲೆ ಹೊದೆಯುವ ವಸ್ತ್ರ, ಸೆರಗು, ಶಲ್ಯ

ಮೊಳಗು – ಧ್ವನಿಮಾಡು, ಶಬ್ದ/ಸದ್ದು ಮಾಡು, ಆರ್ಭಟಿಸು

## ಯ

ಯಷ್ಟಿ – ಊರುಗೋಲು, ಬಡಿಗೆ, ಕೋಲು

## ರ

ರಾಳ – ಬೆಂಕಿಯ ಜ್ವಾಲೆ ಹೆಚ್ಚಿಸಲು ಬಳಸುವ ಪುಡಿ, ರಾಲ ಮರದಿಂದ ದೊರಕುವ ಅಂಟು, ಸಜ್ಜರಸ

ರವಿ – ಸೂರ್ಯ, ಎಕ್ಕದಗಿಡ, ಬೆಟ್ಟ, ಪರ್ವತ, ವಿಭಾಕರ

ರುಜಾ – ರೋಗ, ಕಾಯಿಲೆ, ವ್ಯಾಧಿ

## ಲ

ಲುಬ್ಧಕ – ಬೇಡ, ಬೇಟೆಗಾರ, ಜಿಪುಣ, ಲೋಭಿ

## ವ

ವನ – ಕಾಡು, ಅರಣ್ಯ, ಸಮೂಹ, ಗುಂಪು

ವರೂಥ – ರಥ, ತೇರು

ವಾಡಿಕೆ – ಸಂಪ್ರದಾಯ, ರೂಢಿ, ಅಭ್ಯಾಸ, ಪದ್ಧತಿ

ವಿಜ್ಞಾಪನೆ – ಬಿನ್ನಹ, ಮನವಿ, ಅರಿಕೆ

ವಿತತ – ವಿಸ್ತಾರವಾದ , ಹರಡಿಕೊಂಡಿರುವ, ಉತ್ತಮವಾದ

ವಿಪಿನ – ಕಾಡು, ಅಡವಿ, ಕಾನನ

ವಿಭವ – ಘನತೆ, ಹಿರಿಮೆ, ಸಿರಿ, ಸಂಪತ್ತು

ವಿಭು – ಪ್ರಭು, ರಾಜ, ಒಡೆಯ, ಯಜಮಾನ, ದೇವರು

ವೃದ್ಧ – ಮುದುಕ, ವಯಸ್ಸಾದ ವ್ಯಕ್ತಿ, ಮುಪ್ಪಾದ, ಪೂಜ್ಯ, ವಿವೇಕವುಳ್ಳ

ವೇಷ್ಟಿ – ಪಂಚೆ, ಧೋತ್ರ, ದಟ್ಟಿ

ವ್ಯೋಮ – ಆಕಾಶ, ಗಗನ, ವಾಯುಮಂಡಲ, ವಾತಾವರಣ

ವ್ರಜ – ಸಮೂಹ, ಗುಂಪು, ದನಗಳ ಹಿಂಡು, ಗೋಕುಲ(ಹಿಂದಿನ)

### ಶ

ಶಶಿ – ಚಂದ್ರ, ಶಶಿ, ತಿಂಗಳು

ಶಾಸ್ತಿ – ದಂಡನೆ, ಶಿಕ್ಷೆ

ಶಿಥಿಲ – ಕ್ಷೀಣಿಸು, ಜೀರ್ಣ, ಅಸ್ಪಷ್ಟ, ಕೃಶ, ಬಲಹೀನ

ಶಿರ – ತಲೆ, ನರರುಂಡ, ಶಿಖರ

ಶ್ರೀವಿಲಾಸ – ವೈಭವ

### ಸ

ಸಂಕೀರ್ಣ – ಕೂಡಿದ, ಸೇರಿದ, ಮಿಳಿತ, ಜಟಿಲ, ಗಹನ

ಸರಳು – ಬಾಣ, ಅಂಬು, ಕಣೆ,ಸಲಾಕೆ, ಲೋಹದ ಕಂಬಿ

ಸಾರೋಟ್ – ಕುದುರೆಗಳನ್ನು ಕಟ್ಟಿ ಓಡಿಸುವ ನಾಲ್ಕು ಚಕ್ರದ ರಾಜರಥ

ಸಾಷ್ಟಾಂಗ – ಎಂಟು ಅಂಗಗಳನ್ನು ನೆಲಕ್ಕೆ ತಾಗಿಸಿ ಮಾಡುವ ನಮಸ್ಕಾರ

ಸಿರಿ – ಸಂಪತ್ತು, ಐಶ್ವರ್ಯ, ಲಕ್ಷ್ಮೀ, ಅಧಿಕ್ಯ, ಏಳಿಗೆ

ಸುಗಿ – ಹರಿ, ಸೀಳು, ಸಿಗಿ, ಸೆಳೆ, ಎಳೆ, ಸುಲಿಗೆ

### ಹ

ಹಂಬಲ – ಚಿಂತೆ, ತವಕ

ಹಸನು – ಯಶಸ್ವಿ, ಚೆನ್ನಾಗು, ಶುಚಿ

ಹಾಸುಹೊಕ್ಕು–ಆವರಿಸು, ಪಸರಿಸು, ಜನಜನಿತ

ಹಾಹಾಕಾರ –ಗೋಳಾಟ, ಕೋಲಾಹಲ, ಗದ್ದಲ

ಹೇಮ – ಚಿನ್ನ, ಹೊನ್ನು

ಹೇಯ – ಕೆಟ್ಟ, ನೀಚ

ಹೊನ್ನಾವಿಗೆ–ಚಿನ್ನದಪಾದುಕೆ



